### ನೋಡಿದರೆನ್ನೊಡೆಯನ ನೋಡುವೆ

ನೊಡಿದರೆನ್ನೊಡೆಯನ ನೋಡುವೆ। ಪಾಡಿದರೆನ್ನೊಡೆಯನ ಪಾಡುವೆ। ಬೇಡಿದರೆನ್ನೊಡೆಯನ ಬೇಡುವೆ। ಕಾಡಿದರೆನ್ನೊಡೆಯನ ಕಾಡುವೆ। ಒಡೆಯಗೆ ಒಡಲನು ತೋರುವೆ। ಎನ್ನ ಬಡತನ ಬಿನ್ನಹ ಮಾಡುವೆ। ಒಡೆಯ ಶ್ರೀ ಪುರಂದರವಿಠಲರಾಯನ ಅಡಿಗಳ ಸಾರಿ ಬದುಕುವೆ ಸೇರಿ ಬದುಕುವೆ॥

### ಬೇವಿನ ಬೀಜ ಬಿತ್ತಿ

ಬೇವಿನ ಬೀಜ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ । ಜೇನ ಮಳೆಗರೆದರೆ ವಿಷ ಹೋಹುದೇನಯ್ಯ। ಏನು ಓದಿದರೇನು ಏನು ಕೇಳಿದರೇನು। ಮನದೊಳಗಿನ ತಾಮಸ ಮಾಣದನಕ ಕೊಳಲ ದನಿಗೆ ಸರ್ಪ ತಲೆದೂಗುವಂದದಿ ಎನ್ನೊಡೆಯ ಕೇಳಯ್ಯ ಶ್ರೀಪತಿ ಪುರಂದರವಿಠಲ॥

### ಮಲಗಿ ಪಾಡಿದರೆ ಕುಳಿತು

ಮಲಗಿ ಪಾಡಿದರೆ ಕುಳಿತು ಕೇಳುವನು। ಕುಳಿತು ಪಾಡಿದರೆ ನಿಂತು ಕೇಳುವನು। ನಿಂತು ಪಾಡಿದರೆ ನಲಿದು ಕೇಳುವನು। ನಲಿದು ಪಾಡಿದರೆ ಸ್ವರ್ಗ ಸೂರೆಬಿಟ್ಟೆನೆಂಬೆ ಪುರಂದರವಿಠಲ॥

### ಹರಿಶ್ರವಣ ಕೀರ್ತನೆ

ಹರಿಶ್ರವಣ ಕೀರ್ತನೆ ಹರಿ ನಾಮಸ್ಮರಣ। ಹರಿಪಾದಸೇವನ ಹರಿಪೂಜಾ ವಂದನ। ಹರಿದಾಸ ಸಖ್ಯತ್ವ ಹರಿಗಾತ್ಮಾರ್ಪಣ। ಹರಿಭಕ್ತಿಯೇ ಮುಕ್ತಿ ಪಥತತ್ವ। ಪುರಂದರವಿಠಲನೇ ಪರಮಾತ್ಮ ಸಿದ್ಧ॥

### ಹೇಗೆ ಬರೆದಿತ್ತೊ ಪ್ರಾಚೀನದಲ್ಲಿ — ರಾಗ:ಶಂಕರಾಭರಣ

ಹೇಗೆ ಬರೆದಿತ್ತೊ ಪ್ರಾಚೀನದಲ್ಲಿ। ಹಾಗೆ ಇರಬೇಕು ಸಂಸಾರದಲ್ಲಿ। ಪಕ್ಷಿ ಕೂತಿತ್ತು ಅಂಗಳದಲ್ಲಿ। ಹಾರಿ ಹೋಯಿತು ಆ ಕ್ಷಣದಲ್ಲಿ। ಆಡುವ ಮಕ್ಕಳು ಮನೆ ಕಟ್ಟಿದರು। ಆಟ ಸಾಕೆಂದು ಮುರಿದೋಡಿದರು। ಸಂತೆ ನೆರೆದೀತು ನಾನಾ ಪರಿ। ತಿರುಗಿ ಆಯಿತು ತಮತಮ್ಮ ದಾರಿ। ವಸ್ತಿಕಾರ ವಸ್ತಿಗೆ ಬಂದ। ಹೊತ್ತಾರೆ ಎದ್ದು ಊರಿಗೆ ಹೋದ ಈ। ಸಂಸಾರ ಮಾಯ ಬಿಡಿಸಿ॥ ಕಾಯೊ ಪುರಂದರವಿಠಲ॥

## ಇತರೆ

## ಭಾಷಾ ಸಾಮರಸ್ಯ

### ಅಸೀ ದೇಶ್ ದೋ (ಪಂಜಾಬಿ)

ಅಸೀ ದೇಶ್ ದೋ ಚಢದೋ ಲಾಲಿ। ರುತ್ತೋಂ ರುತ್ತ ಬಹಾರಾಂ। ಹರ್ ದಿನ್ ದಿಯಾಂ ನುಹಾರಾಂ ನವಿಯಾಂ। ನವಿಯಾಂ ಮೌಜ್ ಮಲ್ಹಾರಾ। ಅಸೀ ದೇಶ್ ದೋ ಚಢದೋ ಲಾಲಿ॥ ಮಟಕ್ ಹುಲಾರೆ ಪೋಟೆ ಪೋಟೆ। ಚೌಕಡಿಯಾ ಭರದೆ ಹರ್ ನೋಟೆ। ನಚ್ಚದಿಯಾಂ ಟಪ್ಪದಿಯಾಂ ಡಾರಾಂ। ಅಸೀದೇಶ್ ದೋ ಚಢದೋ ಲಾಲಿ॥ ಓ ಆಯಿ ಸಖಿಯಾಂ ದೋ ಟೋಲೀ। ಹರ್ ಕೋಯೀ ಬೋಲೆ ಪ್ಯಾರಿ ಬೋಲಿ। ಗುಟಕಣ್ ಜಿವೇಂ ಗುಟಾರಾಂ। ಅಸೀ ದೇಶ್ ದೋ ಚಢೋ ಲಾಲಿ॥ ದುನಿಯಾ ಭರ್ ದೆ ದಿಲ್ ನೂ ಮೋಹಿಯೇ। ದುನಿಯಾ ದೆ ಸೆಹರೆ ವಿಚ್ ತೋಹಿಯೆ। ಜೋಂ ಸೋನೆ ದಿಯಾಂ ತಾರಾಂ। ಅಸೀ ದೇಶ್ ದೋ ಚಢದೋ ಲಾಲಿ॥

### ಆಹೆ ನೀಳೋ (ಉಡಿಯಾ)

ಆಹೆ ನೀಳೋ ಸೋಯಿಲೌ ಪ್ರೌ ಬೋಲೋ ಮೌತೊ ಬಾರೋಣೋ। ಮೊ ಆರೌತೊ ಸಾಲೀನೀ ಬೋನೋಕು

ಕೌರೀ ಕ್ರಾಲೌನಿ। ಗೌಜೋರಾಜೀ ಚಿಂತಾಕೌಲಾ ಥಾಯಿ ಫೌರೊ ಜೌಣಣೋ। ಚಾಕ್ರೋಪೆಸೀ ಸಾಕ್ರೋನಾಸಿ ಉದ್ಧಾರಿಲೌ ಆಪಾಣೌ॥ ಕುರು ಸೌಭಾ ಸ್ಥೌಲೆ ಸುಣಿ ದ್ರೌಪೋದೋರೋ ಸೌಣಾಣೌ। ಕೋಟಿ ಚಾಸ್ತ್ರೋ ದೆಯಿ ಹೆಲೆ ಲೌಜ್ಜಾ ಕೌರೊ ಬಾರಾಣೋ ಕೌಹೆ ಸಾಲಬೆಗ್ ಹೀನ್ ಜಾತಿ ರೆ ಮೊ ಜಾಥೋನ್। ಶ್ರೀ ರಂಗ್ ಚಾರೋಣ್ ತೌಲೆ ಕೋರು ಜಾಥೀ ಜೋಣಾಣೋ॥

**ಓಕುಣ್ ಬೋಜೆ (ರಾಜಾಸ್ತಾನಿ)**

ಓ ಕುಣ್ ಬೋಜೆ ಬಾಜರೋ ಯೆ ಬದರಾ। ಓ ಕುಣ್ ಬೋಜೆ ಮೋಠ್ಕೆ ಮೇವಾ ಮಿಸರೀ।ಸುರಂಗೀ ರುತ್ ಆಯೀ ಮ್ಹಾರಾ ದೇಸ್ ಮೆ। ಭಲೆರಾ ರುತ್ ಆಯಿ ಮ್ಹಾರಾ ದೇಸ್ ಮೆ॥ ರಾಮ್‌ಜಿ ಬೀಜೆ ಬಾಜರೋ ಯೆ ಬದರೀ। ಕಾಣೂ ಬೋಜೆ ಮೋಠ್ ಮೇವಾ ಮಿಸರೀ॥ ಕಾಂಕಣ ಮೆ ಮೋರ್ಯಾ ನಾಚೆಲಾ। ಕೋಯಲಡೊ ಮ್ಹಾಣೆ ಗೀತ್ ಸುಣವೆಲಾ॥ ಹರಿಯಾ ಹರಿಯಾ ಖೇತ್ ಸುಹಾಣಾ। ಬಾಜರ್ ಚಡಿಯೋ ನಿಧಾನ್ ಮೋರಾ ರಾಮಾ॥

**ಕನ್ನಾಲು2 ಪುಳ್ಳಿಕು ಪೊಣ್ಣುಕು (ಸಂಕೇತಿ)** **ರಾಗ: ಶ್ರೀ**

ಕನ್ನಾಲು ಕನ್ನಾಲು ಪುಳ್ಳಿಕು ಪೊಣ್ಣುಕು ಕನ್ನಾಲು। ಕನ್ನಾಲು ಕನ್ನಾಲು ಕೋಲ ಪೊಣ್ಣುಕು ಪುಳ್ಳಿಕು ಕನ್ನಾಲು॥ಪ॥ ಹುಡಗನ ಹಸೇಕು ಅಳ್ಚಿಂಡ್ ವಂದ ಭಾದ್ಯ ಮಂತ್ರು ಚೊಲ್ಲಿ ಕುಡ್ತ ಮಂತ್ರು ಪೆಪೆಪೆಪೆ ಆಯಿ ಪೋಚಿ॥ ಹುಡುಗಂದೆ ಕಳ್ತುಳ್ಳೆ ಜನಿವಾರಮೆ ಇಲ್ಲೆ॥1॥ ಕೂಟಿ ಕೂಟಿ ವಚ್ಚ ಗಂಟು ಒರೇ ಕಾಲಕೆ ಮುಂಡ್ಜೇ ಪೋಚಿ। ಮಾಮನುಕ್ಕು ಕೋಪು ವಂದು ಸರಿಯಾಯ್ಚಿ ಪ್ರೆಸೆನ್‌ಟೇಷನ್ ಕುಡ್ತೇ ಇಲ್ಲ॥2॥ ಅಂತೂ ಇಂತೂ ಕನ್ನಾಲ್ ಮಾಚಿ। ಬೀಗಾಳೆಲ್ಲಾ ಪೋಯ್ಚಿವಂದ। ಹಾತೇನೆಂಟ ಮುನಿಸಿಳ್ಳೆರಾಂಡ। ರಂಡವಾರಿ ಹಪ್ಪತ ಇಟ್ಟೇಇಲ್ಲ॥3॥

**ಕಮ್ ಓ ಬಲ್ಕಿ ಸ್ವಮಕ್ (ಇಂಗ್ಲೀಷ್)** **ರಾಗ: ಕಲ್ಯಾಣಿ**

ಕಮ್ ಓ ಬಲ್ಕಿ ಸ್ವಮಕ್ ಗಣಪತಿ ಓ ಲಾರ್ಡ್ ದಿ ಸನ್ ಆಫ್ ಶಿವ ಪಾರ್ವತೀ॥ ರೈಡಿಂಗ್ ಆನ್ ಎ ರ್‍ಯಾಟ್ ಬೆಲ್ಟಿಂಗ್ ಸರ್ಪೆಂಟು ಹ್ಯಾವಿಂಗ್ ದಿ ಫೇಸ್ ಆಫ್ ಅನ್ ಎಲಿಫೆಂಟು॥ ವಿ ಆಫರ್ ಯು ದ ಕಡುಬು ಪಾಯಸ (ಕಜ್ಜಾಯ ಪಾಯಸ) ಓ ಲಾರ್ಡ್ ದಿ ಸ್ಟೆನೊ ಆಫ್ ವೇದವ್ಯಾಸ॥ ಕಮ್‌ಕಮ್ ಸೂನ್ ಪನಿಷರಫ್ ಮೂನ್ ಬೆಗ್ಸ್ ಆಫ್ ಯು ವಿ ಆಲ್ ಫಾರ್ ಯುವರ್ ಬೂನ್॥

**ಗಾಳಿಕ್ ರಂಗಿಲ್ಲೆ ಮೋಡಕ್ ನೆಲೆ ಇಲ್ಲೆ (ಕೊಡವ ಜಾನಪದ)** **ರಾಗ:ಸಾವೇರಿ**

ಗಾಳಿಕ್ ರಂಗಿಲ್ಲೆ ಮೋಡಕ್ ನೆಲೆ ಇಲ್ಲೆ (2 ಸಾರಿ) ಅವ್ವಂಡ ಮನೆ ದಾರ್‌ಕು ಸ್ಥಿರವಿಲ್ಲೆ (2 ಸಾರಿ) ಮೋಳೆ ಸೇರಕ್ತ ಬಾಕೇನ ವಿಧಿ ಇಲ್ಲೇ ॥ ಗಾಳಿಕ್ ॥ ಅಪ್ಪಂಡ ನೊಣೆ ಕುಞ, ಅವ್ವಂಡ ಕೊದಿ ಕುಞ (2 ಸಾರಿ) ತೀಂದಕ್ ಈ ಮನೆರ ಋಣ ಕುಞ (2 ಸಾರಿ) ಮೋಳೆ ಸೇರತ್ತ ಬಾಕೇವ ವಿಧಿ ಇಲ್ಲೆ ॥ ಗಾಳಿಕ್ ॥ ಕರಿಂಗಲ್ ಕರಿಯಾಗ, ಪೋರಿಂಗಲ್ ಪೊರಿಯಾಗ, ಪಳಂಜೋಲ್ ಎಂದ್ ಉರಿಯಾಗ (2 ಸಾರಿ) ಮೋಳೆ ಪರಜನಕ್ ಪರಿಪಾಠ ಕೊದಿಯಾಗ ॥ ಗಾಳಿಕ್ ॥ 2 ಸಾರಿ ॥ ಮಾನವ ಮದಿಕೊಂಡು, ಮಾಯೀನ ತುದಿಕೊಂಡು, ಮನೆದೇವ ಒಡಿಯಂದ್ ತುದಿಕೊಂಡ್ (2 ಸಾರಿ) ಮೋಳೆ, ಸೇರತ ಬಾಕೇನ ವಿಧಿ ಇಲ್ಲೆ ॥ ಗಾಳಿಕ್ ॥2 ಸಾರಿ ॥ ಅಟ್ಟತ್ತ್ ಮೊರಡಂಡ ಕೊಟ್ಟಲ್ ಕೊರಗಂಡ (2 ಸಾರಿ) ಮೊಟ್ಟಲ್ ಕಾಲಾಟ್ಯಂಡ್ ಅಳಕಂಡ (2 ಸಾರಿ) ಮೋಳೆ ವಿರ್ ಪವನ ಯರುವೋಂದ್ ಗೊಣಗಂಡ್ ॥ ಗಾಳಿಕ್ ॥ 4 ॥ ಉಂಬಕ್ ತಡ ಆಕು, ಉಂಡದ್ ಪೊರತಾಕು (2 ಸಾರಿ) ಉಂಡಾನೆ ಉಂಡಿತ್ ಬುಡುಂಜೋಕ್ (2) ಮೋಳೆ। ಕಟ್ಟೇನ ಕರೆ ಪೋಲ್ ಬರಂ ಜೋಕು॥ಗಾಳಿಕ್॥5॥

**ಚರಣ ಕಮಲ ಬಂದೌ (ಹಿಂದಿ)** **ರಾಗ:ಸಾರಂಗ**

ಚರಣ ಕಮಲ ಬಂದೌ ಹರಿರಾಯಿ। ಜಾಕೀ ಕೃಪಾ ಪಂಗು ಗಿರಿ ಲಂಘೈ। ಅಂಧೇಕೋ ಸಬಕಛು ದರಸಾಯಿ॥1॥

ಬಹಿರೋ ಸುನ್ನೈ ಕಛು ಮೂಕ ಪುನಿ ಬೋಲೈ। ರಂಕ ಚಲೈ ಸಿರ ಛತ್ರ ಧರಾಯಿ॥2॥ ಸೂರದಾಸ ಸ್ವಾಮಿ ಕರುಣಾಮಯ। ಬಾರ ಬಾರ ಬಂದೌ ತೋಹಿ ಪಾಯಿ॥3॥

**ಜಯ ಜಯದೇವಿ (ತಮಿಳು)** **ರಾಗ: ಪುನ್ನಾಗವರಾಳಿ**

ಜಯ ಜಯದೇವಿ ಜಯ ದುರ್ಗಾದೇವಿ ಶರಣಂ ಕನಕ ದುರ್ಗಾದೇವಿ ಶರಣಂ॥ಪ॥ ದುರ್ಗೈಯಮ್ಮನ್ನೈ ತುದಿತ್ತಾಲ್ ಎನ್ರುಂ ತುಂನ್ಬಂ ಪರಂದೋಡುಂ। ಧರ್ಮಂ ಕಾಕ್ಕುಂ ತಾಯುಂ ಅವಳೇ ದರಿಶನಂ ಕಂಡಾಲ್ ಪೋದುಂ। ಕರ್ಮ ವಿನೈಗಳ್ ಓಡುಂ ಸರ್ವ ಮಂಗಳಂ ಕೂಡುಂ॥1॥ ಪೊರ್‌ಕರಂಗಳ್ ಪದಿನೆಟ್ಟುಂ ನಮ್ಮೈ ಸುತ್ತಿವರುಂ ಪಗ್ಯೈ ವಿರಟ್ಟುಂ। ನೆತ್ತಿಯಿಲೇ ಕುಂಕುಮ ಪೊಟ್ಟುಂ ವೆಟ್ರಿ ಪಾದೆಯ್ಯೈ ಕಾಟ್ಟುಂ ಆಯಿರಂ ಕಣ್‌ಗಳ್ ಉಡೆಯವಳೇ ಆದಿಶಕ್ತಿ ಅವಳ್ ಪೆರಿಯವಳೆ। ಆಯಿರಂ ನಾಮಂಗಳ್ ಕೊಂಡವಳೇ ತಾಯ್ ಪೋಲ್ ನಮ್ಮೈ ಕಾಪ್ಪವಳೆ॥2॥ ಸಂಗು ಚಕ್ಕರಂ ವಿಲ್ಲುಂ ಅಂಬುಂ ಮಿನ್ನುಂ ವಾಳುಂ ವೇಲುಡನ್ ವೆನ್ರುಂ। ಶೂಲಮುಂ ತಂಗ ಕೈಗಳಿಳ್ ತಾಂಗಿ ನಿಪ್ಪಾಯ್ ಸಿಂಗತ್ತಿನ್ ಮೇಲ್ ಅವಳ್। ವೀಟ್ಟಿರಿಪ್ಪಾಯ್ ತಿಂಗಳೈ ಮುಡಿಮೇಲ್ ಸೂಡಿ ವರುವಾಳ್ ಮಂಗಳ ವಾಳ್ವಂ ತಂದಿಡುವಾಳ್ ಮಂಗೆಯರ್‌ಕರಸಿಯುಂ ಅವಳೇ ಅಂಗೆಯರ್ ಕಣ್ಣೆಯುಂ ಅವಳೇ॥3॥

**ಝುಮ್ಮಿ ರಮ್ಮಿ ನ್ಯಾಚ್‌ಲಬು (ಲಂಬಾಣಿ)**

ಝುಮ್ಮಿ ರಮ್ಮಿ ನ್ಯಾಚುಲಬು ಲಾಯೆ ಸಖಿ ಚಲ್‌ರೆ ॥ಪ॥ ಹಾಥೋಂಕಿ ಚುಡಿಯಾ ಲಾಯೋರೇ ಲಂಬಾಣಿ। ಓರೆ ಲಾರಿಯೋ ತೇರಿಯೋ ಲಂಬಾಣಿ॥1॥ ಕಾನೋಂಕಿ ವಾಲಿಯಾ ಲಾಯೋರೇ ಲಂಬಾಣಿ। ಓರೆ ಲಾರಿಯೋ ತೇರಿಯೋ ಲಂಬಾಣಿ॥2॥

**ತಪ್ಪುಲನ್ನಿಯು ತಾಳುಕೊಮ್ಮು (ತೆಲುಗು)** **ರಾಗ: ಗೌಳಿಪಂತು, ಆದಿತಾಳ**

ತಪ್ಪುಲನ್ನಿಯು ತಾಳುಕೊಮ್ಮು ಚಾಮುಂಡೇಶ್ವರಿ ನಾದು॥ಪ॥ ಮೆಪ್ಪುಲಕ್ಕೆ ಮಾಟಪಲಿಕ್ಕಿ ಮೇಲ್ಮಿ(ಯೌ) ಗೆಂಜಿನ ನಾದು॥ಅ.ಪ॥ ಅಂಬನಾದು ವಿನ್ನಪಮುಲನ್ನಿಯು ನಾದರಿಂಚುಮನಿ। ನಮ್ಮಿತಿಹರಿ ಕೇಶಜಾಯೇ ರಕ್ಷಿಂಚವಲೆನು ಮಾಯೇ॥ಚರಣ॥

**ಹಿ ಮುಹಿಂಜೋವತನ್ (ಸಿಂಧಿ)**

ಹಿ ಮುಹಿಂಜೋವತನ್, ಮುಹಿಂಜೋವತನ್। ಮುಹಿಂಜೋವತನ್॥ಪ॥ ಮಿಸರಿಯ ಖಾ ಮಿಠೇರೋ, ಮಾಖಿಯಖಾ ಮಿಠೇರೋ।ಕುರ್ ಬಾನ್ ತೆಹೆ ವತಂತ ಕರ್ಯಾ ಪೆಹೆಂಜೊ ತನ್ ಬದನ್ ಹಿ ಮುಹಿಂಜೊ..॥1॥ ಮಿಠ್ ಡೆ ವತನ್ ಕಾ ಅಊರಖೀ ಕೀಬಿನವಾರ್ಯಾ। ಜೇಕೀ ಹುಜೆಮ್ ಡೇಈವರಿ ಕೀನ ಪಚಾರ್ಯ। ದಿಲ್ ಮೆ ಹಮೇಶಾ ಶಾಲ್ ರಹೆ ದೇಶ್ ಜೀಲಗನ್। ಹಿ ಮುಹಿಂಜೊ....॥2॥ ಜೈ ಚಾಹ್ ಅಥಮ್ ಕಾತವತನ್ ಶಾದ್ ಡೀ ಸಾಮಾ। ಆಜಾದ್ ಡಿಸಾಮೊ ಸದಾ ಆಬಾದ್ ಡಿಸಾಮಾ। ಮಸ್ತಿಯ ಇನ್ ಹಿಯಮೆ ಆಯೆ 'ದುಖಾಯಲ್'ಜಿ ದಿಲ್ ಮಗನ್ ಹಿ ಮುಹಿಂಜೊವತನ್॥3॥

**ಏ ಇ ದಿಸೋ ಯೇ ಇ ಮಾಟೀ (ಒರಿಯಾ)**

ಯೇ ಇ ದಿಸೋ ಯೇ ಇ ಮಾಟೀ। ಮೊಮೊತ ಮೊಯಿ ಮಾಟೀ॥ಪ॥ ಸೆಬೊರೆ ತಾರೋ ಜಿಬೋನೆದೆಬಾ। ರೂಖಿಬಾ ತಾರವ್ ನಾಟಿ। ಸುಜೊಳೊ ಸುಫೊಳೊ ಸೊಸ್ಯೊ ಶ್ಯಾಮೋಳೊ। ಅಮೊಯೆ ಜೋನ್ಮೊ ಮಾಟೀ॥1॥ ಜೋಹಿ ಝೊರೋಣೊ ಝೊರೀರಿ ಜಾಯ್। ಜೋಹಿ ಕೋಯಿಲಿ ಕೂಹು ಗಾಯ್। ಸುನಾ ಫಸಲೊ ಲೊಹಿರಿ ಖೇಲೀ। ಬುಕುರೇ ಜಾಯೆ ಲೋಟಿ।ಸುಜೊಳೊ॥2॥ ಚಿರೊ ಮೊಳೊಯೊ ಜೋರೊ ಪೊವೊನೊ। ಚಿರೊ

ಸೊಬುಜೊ ಜೋರೊ ಕೊನೊನೊ। ಸಾಗರೊ ಜೊಹೊರೂ ರೊತ್ನೊ ಭೊಂಡಾರೊ। ಕೋಟಿ ರೊತ್ನೊ ದಿಯೇ ಭೇಂಟಿ ।।ಸುಜೊಲೊ।।3।।

**ತಾಥೈಯಾ2 ನಾಚೇ ಭೋಲಾ (ಬಂಗಾಳಿ)** **ರಾಗ:ಶಿವರಂಜನಿ**

ತಾಥೈಯಾ ತಾಥೈಯಾ ನಾಚೇ ಭೋಲಾ। ಬಂಬಬ ಬಾಜೇ ಗಾಲ।।ಪ।। ಡಿಮಿ ಡಿಮಿ ಡಿಮಿ ಡಮರು ಬಾಜೇ। ದುಲಿಛೇ ಕಪಾಲ ಮಾಲ।।1।। ಗರಜೇ ಗಂಗಾ ಜಟಾ ಮಾಝೇ। ಉಗರೇ ಅನಲ ತ್ರಿಶೂಲ ರಾಜೇ।।2।। ಧಕಧಕ ಧಕ ಮೌಲಿ ಬಂಧ ಜ್ವಲೇ ಶಶಾಂಕ ಭಾಲ।।3।।

**ದಯಾಮಯಿ ಶಾರದಾ (ಸಂಸ್ಕೃತ)** **ರಾಗ: ಜೋನ್‌ಪುರಿ**

ದಯಾಮಯಿ ಶಾರದಾ ಮಾಂ ಪಾಹಿ ಭಯಾಪಹಾರಿಣಿ ಸದಾ ಸ್ಮಿತವದನೆ।।ಪ।। ದಯಾಘನ ಗಾನ ಜ್ಞಾನರೂಪಿಣಿ ಸುಯೋಗಕಾರಕ ಮಮಪದದಾಯಿನಿ।।ಅ.ಪ.।। ಶೃಂಗಗಿರಿ ಪೀಠ ಮೂಲಕಾರಿಣಿ ಮಂಗಳಕರ ವರವಿದ್ಯಾದಾಯಿನಿ। ತುಂಗ ಸಂಗ ಸಹ್ಯಾದ್ರಿ ವಿಹಾರಿಣಿ ಶಂಕರ ಗುರುವರ ಕುಮಾರ ಪೋಷಿಣಿ।।1।।

**ನಾ ಬಂಧಾನಾ ಮಾರಾ (ಅಸ್ಸಾಮಿ)**

ನಾ ಬಂಧಾನಾ ಮಾರಾ ಮಾಯೆ। ಯೆ ಹೇ ಓ ಮಾಯಿ ಗಾಖೀರ್ ಖೋಆ ನಾಯೀ। ಬಿನಾ ದೋಹೆ ಬಾಂಧಿ ಮಾರಾ ಪೌರೋರ್ ಪುತ್ರೋ ಪಾಯೀ ಯೆಹಿ ಬುಲೊ ಕಾಂದಿಲೌಂತೊ ಪ್ರೊಭು ಜೋಂದೂಮೋನೀ। ತೌಥಾಪಿ ಜೋರಲ ಆಯೆ ಬಾಂಧಿ ಟಾನಿಹ್ ಟಾನಿಹ।। ನೋಜರೀಲಾ ಪಾಸೆ ಆಂಗುಲ ದುಯೀ ಜೋರೀ। ಆರೋ ಜೋರೀ ಆನೀ ಬಾಂಧೆ ಜೊಹುಆ ಹುಂದೋರೀ। ಓ ಮಾಯಿ ಗಾಖೀರ್ ಖೋಆ ನಾಯೀ।। ಮಾಯೌರೊ ಹೋಮೊ ದೇಖೀ ಮೋನೆ ಮೋನೆ ಗುನೀ। ಕೃಪಾಮೌಯ ಕೃಷ್ಣೆ ಬಾಂಧ್ ಲೋಯೀಲೆ ಕೋ ಆಪುನೀ। ಓ ಮಾಯೀ ಗಾಖೀರ್ ಖೋಆ ನಾಯೀ।।

**ಭೊಮ್ಮ2 ತಾ ಥೈಯ (ಮರಾಠಿ-ಜಾನಪದಗೀತೆ)** **ರಾಗ: ಶಂಕರಾಭರಣ**

ಭೊಮ್ಮ ಭೊಮ್ಮ ತಾ ಥೈಯ ಥೈಯ ತಕ ದಿನಾಂ ದಿನಾಂ ಕ ತೊಂ ಭಜಂ ಕರೇ। ಉತ್ತಿನ್ನಾದಿ ಧಿತ್ತಿನ್ನಾದಿ ಧಿತ್ತಾಂ ಧಿತ್ತಾಂ ಥೋಂ। ಥೈ ಥೈ ಗಣಪತಿ ನಾಂ ಸದಾ।।ಪ।। ಅಪರ ಭಾಜಸೆ ಕರಂ ಭಾಜತೇ ಅಕೇನಾಚತೆ ಗಣರಾಯ। ವೇಣು ವಾದ್ಯಕಿ ಮಕರ ಕುಂಡಲಕಿ ಸ್ವರ ಮಂಡಲಕಿ ಸ್ವರ ಭಾಜಾ।।1।। ಧಿಮಿಕಿಟತಕ ಧಿಮಿಕಿಟತಕ ಧಿಮಿಕಿಟತಕ ಧಿತ್ತಿಲ್ಲಾನಾ। ಧಿನಾಂ ಧಿನಾಂ ಥೋಂ ಧಿತ್ತಾಂ ಧಿತ್ತಾಂ ಥೋಂ। ಉತ್ತಿನ್ನಾದಿ ಧಿತ್ತಿನ್ನಾದಿ ಧಿತ್ತಾಂ ಧಿತ್ತಾಂ ಥೋಂ।।2।। ಅಪರ ಭಾಜಸೇ ಕರಂ ಭಾಜಸೇ। ಧಿಮಿ ಧಿಮಿ ಧಿಮಿ ಧಿಮಿ ಮೃದಂಗೇ। ನವಾಬ ಸಾರಗಿ ಸಿತಾರ ಝುಣರೀ। ಅಪರ ಭಾಜಕರ್ ಮೊಗ ಸಿರಿಯೇ।।3।। ಧಿಕ್ಕಿಗೀಡ್ದ ಧಿಕ್ಕಿಗೀಡ್ದ ದಿಗಿಡ ದಿಗಿಡ ಥೋಂ। ತಾಕಿಟದ ತಾಕಿಟದ ಥೋಂ ಭಜಂ ಕರೇ। ಬಾದುನ್ನಿತ್ತ ನಾದರ್ ದಿನ್ನಾ ಧಿತ್ತಾಂ ಧಿತ್ತಾಂ ಥೋಂ। ಥೋಂ ಥೋಂ ಗಣಪತಿ ನಾಮ್ ಸದಾ।।4।।

**ತದನತೊಂತಾನೇ ತಾನೇನೋ (ಮಲೆಯಾಳಂ)** **ರಾಗ: ಶ್ರೀ**

ತದನತೊಂ ತಾನೆ ತಾನೆನೋ ತಗತಾಂರಗ ಥೈ ಥೈ ತದನತ್ತೋಂ ತಾನೆ ತಾನೆನೋ।।ಪ।। ಮಾವೇಲಿ ವೀಡುಂ ವನ್ನಲ್ಲೋ ಮಣ್ಣಿಂಡೆ ಮಕ್ಕಳ ಕೊನ್ನ ಪೂಂಗಲ ಕಣಿವೆಚ್ಚದೀರೆಟ್ಟು। ಪೂಮಾಲ ಜಾತಿ।।1।। ತಾಲ ಪೊಲಿಯುಂ ನರಪುರಯುಂ ವೆಚ್ಚು। ಮಜಕೋಡಿ ಚುಟ್ಟಿ। ಬಾಲಾ ತರುಣಿಗಳ್ ತಿರುವಾದಿರ ಪಾಡಿ। ವರವೇಟು ನಿನ್ನು।।2।। ಅತ್ತ ಪೂಮಣಿ ಮುಟ್ಟ ತಣಯಲ್ಲೆ। ಮಾವೇಲಿ ಮನ್ನ ಪುತ್ತರಿ ಅವಲು ನನಚ್ಚು ತರಾಂ ನ್ಯಾಂಗಳ್ ಇಳನೀರು ಮುಂಡ್‌ಯ।।3।। ಪೊನ್ನುನ್ನಾಲಿ

ಇರುತ್ತಿ ಪಾಡಿಡಾಂ। ಪೊ ತುಂಬಿಕಟ್ಟಿ ನ್ಯಂಗಳು ಚೇರ್ ನೊರು ಕರಡಿ ಕಳಚ್ಚಿಡಾಂ। ಕೈ ಕುಮ್ಮಿ ಕೊಟ್ಟಾಂ।।4।। ಓಡ ಕುಳಲಿನ್ ಕುಯಿರ್ ನಾದಂ ಕೇಳ್ವಾನ್। ಓಲ ಪಂಡಾಡಾಂ। ಕುಟ್ಟಿಯುಂ ಕೋಲುಂ ಕಳಿಚ್ಚು ರಸಿಕ್ಯಾಮೆನ್। ಮಾವೇಲಿ ಮನ್ನನ್।।5।। ನ್ಯಂಗಳೆ ವಿಟ್ಟಿಟ್ಎಂಙ್ಯು ಪೋಗಲ್ಲೆ। ಮಾವೇಲಿ ಮನ್ನ। ಇನಿಯೊರು ನಾಳುಂ ವಂಜಿತರಾಗೂಲ್ಲ್ಯ। ಮಾವೇಲಿ ನಾಟ್ಟಿಲ್।।6।।

## ಯಿಛು ಸೋನ್ ಚಮನ್ (ಕಾಶ್ಮೀರಿ)

ಯಿಛು ಸೋನ್ ಚಮನ್ ಯಿಛು ಸೋನ್ ವತನ್। ಯಿಛು ಸೋನ್ ಚಮನ್ ಯಿಛು ಸೋನ್ ವತನ್।। ನಿಶಾತ್ ಸೋನ್ ಶಾಲ್‌ಮಾರ್ ಲಾಲ್ ಜಾರ್ ಸೋನ್। ಯೆತ್ಯುಕ್ ಶಿಹುಲ್ ಯೆ ಖುಷ್ ಇವುನ್ ಬಹಾರ್ ಸೋನ್। ಛಿ ಅಥ್ ನಿಸಾರ್ ಇವೂಸ್ ವತನ್ ಮುದಿಲ್ ಕರಾರ್ ಸೋನ್। ಛುಂ ನಫರತಸ್ ಕರಾನಗೋರ್ ಲಾಲನಾರ್ ಸೋನ್।। ಛುತಾಜಮಹಲ್ ಅಜತೀ ಸಾನೀ ಮುಹಬ್ಬತುಕ್ ನಿಶಾನ್। ಅಜಂತ್ ಉಕ್ ಜಲಾಲ್ ಸಾನೀಅಜಮತುಕ್ ನಿಶಾನ್। ಘಟನ್ ಅಂದರ್ ತಿಥೋವ್ ಚೋಂಗ್ ಮುಹಬ್ಬತುಕ್ ದಜಾನ್। ಇಮನ್ ರೆವಾಯತನ್ ತಿರ್ಪ ಅಜತೀ ಇಸ್ಕರಾನ್।।

## ರಂಗ್‌ರಂಗೀಲಾ ಫೂಲ್ (ಗುಜರಾತಿ)

ರಂಗ್‌ರಂಗೀಲಾ ಫೂಲ್। ಅಮೆ ಸೌ ರಂಗ್‌ರಂಗೀಲಾ ಫೂಲ್। ಭಾರತ್‌ಮಾನೆ ಖೌಲೆ ಖೀಲತಾಂ। ರಂಗ್‌ರಂಗೀಲಾ ಫೂಲ್ ಅಮೆ ಸೌ।। ದೇಶ್‌ಕ ದೇಶ್‌ನಾಂ ತೆಜ್‌ವಾಯು ಝೀಲೀಎ। ಸದಾ ಸಂಪೋನೆ ಸಾಥ್ ಸಾ ಖೀಲೀಯೆ। ವಿವಿಧ್ ವೇಷ್‌ವಾಣೀ ತೋಯೆ। ಏಕ್ ಜ ಮಾನವಕುಲ್-ಅಮೆ ಸೌ।। ಅಮೆ ಆಗೆ ಕದಮ್ ಸದಾ ಭರೋಯೆ। ಕದೊಕಪಡಾಯೆ ಕದೀಕ್ ಆಥ್‌ಡೋಯೆ। ತೋ ಯ ಅಭಾ ಥಯೀ ಮಾಂಡೋಯ್ ಮಜಲ್। ಸುಧಾರೀ ಲಯೀನೆ ಭೂಲ್ -ಅಮೆ ಸೌ।। ವಿಶ್ವ ಆಂಖಿ ಕುಟಂಬ್ ಛೆ ಅಮಾರು, ಜಗೆ ಧೂಮವಾನುಂ ಲಾಗೆ ಸೌನ್ ಪ್ಯಾರ್। ಸಂಘೀಗೀತ್ ಲಕಾರಿಯೆ। ಸುರೀಲಾ ಮಂಜುಲ್ ಅಮೆ ಸೌ।।

## ರಂಗನು ತೂಯನದೇ ಓಲಾಂಡಲ (ತುಳು) ರಾಗ: ಮೋಹನ

ರಂಗನು ತೂಯನದೇ ಓಲಾಂಡಲ - ಕೃಷ್ಣನು ತೂಯನದೇ।।ಪ।। ಯಮುನೆದಕರೆಬರಿ ಮೇಪದೆ ರೊಟ್ಟುಗು। ಆಟೋ ಕೂಟೊಡುಳ್ಳೆನೋ (ಓ)। ಮರೊಪತ್ತ್ ಕುಳ್ಳೊಂದು ಪುರಳ್‌ನ್ ಉರಿತೊಂದು। ಮರ್ಲ್ಲು ಮಲ್ತೆಂದುಳ್ಳೆಡೋ ಓಲಾಂಡಲ।।1।। ಪೇರ್, ಕೊಜಪು, ಬೊಳ್‌ನ್ನೈ, ಮಾರುನ ಪೊಣ್‌ಳೆಡ। ಸುಂಕೊ ಸುಲಿಗೆ ಮಲ್ಪೆನೋ (ಓ) ಮಾಯೊದ ರಾವು ರಕ್ಕಸರೆ ಗೊಬ್ಬುಗು ಸಂಚ ಕಾರೊ ಕೊರ್ಪುನೆಟ್ಟುಳ್ಳೆಡೊ। ಓಲಾಂಡಲ।।2।। ಒರು ಪಣಯನ ನಮ್ಮ ನಂದಗೋಕುಲ ನಿಧಿ। ಓಲುಳ್ಳೆ, ಬೇಗ ಪಣ್ ..ಆ..। ಅಂಚೆಂಚಿ ನಾಡ್‌ದ್ ಕಾತ್ ಪೆಚಾಡ್‌ದ್। ಬೇಂತಾಡ್ ದಾಯೆ ಯಾನ್। ಓಲಾಂಡಲ।।3।। ಘಮ ಘಮ ಗಮಸುನ ಪೂಮಾಲೆ ನಾಕಿದ್। ಕಂಟೆಲಗ್ ಸಿಂಗರಿದ್ ..ಆ..। ಆ ಪುಣ್ಯ ಮೋಕೆದ ಕಮ್ಮೆನೊಡೊಂಜಾಪಿ। ತನುಮಯ ಕೊರು ಇತ್ತೆನೇ(ಓ) ।।4।।

## ಲಬ್‌ಪೆ ಆತಿ ಹೈ (ಉರ್ದು)

ಲಬ್‌ಪೆ ಆತಿ ಹೈ ದುಆ ಬನ್‌ಕೆ ತಮನ್ನಾ ಮೇರೀ। ಜಿಂದಗೀ ಶಮ್ಮಾ ಕೀ ಸೂರತ್ ಹೊ ಖುದಾಯಾ ಮೇರೀ।। ದೂರ್ ದುನಿಯಾ ಕಾ ಮೇರೆ ದಮ್ ಸೆ ಅಂಧೇರಾ ಹೋ ಜಾಯ್। ಹರ್ ಜಗಹ್ ಮೇರೇ ಚಮಕ್‌ನೇ ಸೇ ಉಜಾಲಾ ಹೋಜಾಯ್।।1।। ಹೋ ಮೇರಾ ಕಾಮ್ ಗರೀಬೋಂ ಕೀ ಹಿಮಾಯತ್ ಕರ್‌ನಾ। ದರ್ದ್ ಮದೋಂ ಸೆ ಜಈಫೋಂ ಸೆ ಮೊಹಬ್ಬತ್ ಕರ್‌ನಾ।।2।। ಮೇರೇ ಅಲ್ಲಾಹ್ ಬುರಾಈ ಸೆ। ಬಚಾನಾ ಮುಝು ಕೋ। ನೇಕ್

ಜೋ ರಾಹ್ ಹೋ ಉಸ್ ರಾಹ್ ಚಲಾನಾ ಮುಝುಕೋ।। ಹೋ ಮೇರೇ ದಮ್‌ಸೆ ಯೂಂ ಹೀ ಮೇರೇ ವತನ್ ಕೀ ಜೀನತ್। ಜಿಸ್ ತರಹ್ ಫೂಲ್ ಸೆ ಹೋತೀ ಹೈ ಚಮನ್ ಕೀ ಜೀನತ್।।

### ವಿಘ್ನಾಧಿಪತಿ ದೇವ ಶಿವಸುತ ಗಣಪತಿಯೆ (ಕನ್ನಡ) ರಾಗ: ಹಿಂದೋಳ, ಆದಿತಾಳ

ವಿಘ್ನಾಧಿಪತಿ ದೇವ ಶಿವಸುತ ಗಣಪತಿಯೆ। ಕರುಣಿಸೋ ಕೀರ್ತಿಯ ಗಜಮೂರುತಿಯೆ ನೀನು।।ಪ।। ಪ್ರಥಮವಂದಿತ ಲಂಬೋದರ ವಿಘ್ನೇಶ್ವರ ದೇವ।।ಅ.ಪ.।। ಬ್ರಹ್ಮನಾ ಸತಿರಾಣಿ ನೀನೆ ವೀಣಾಪಾಣಿ। ಸಾಹಿತ್ಯಕಲ್ಯಾಣಿ ದೇವಿ ಸುಮಧುರ ವಾಣಿ। ಕರುಣಿಸಿ ವರನೀಡೆ। ಶಾರದಾಂಬೆಯೆ ನಿನಗೆ। ನುಡಿಸಿ ಸ್ತುತಿಸುವೆ ನಾಟ್ಯಸರಸ್ವತಿಯೆ ಶ್ರೀದೇವಿ।।1।। ವಂದಿಪೆ ಹರಗುರು ಶರಣರಿಗೆ ಜಗದೊಳು। ವಂದಿಪೆ ಕರುಣಾಮಯಿ ಕನ್ನಡಾಂಬೆಗೆ। ವಂದಿಪೆ ಜನ್ಮದಾತರ ಪೊರೆವ ಜನನಿಗೆ। ವಂದಿಪೆ ತಾಯಿ ಭಾರತಮಾತೆ ಜನನಿಗೆ।।2।।

### ಸೇವಾಕರ್ತಾಂ ದೇವಾ ವಸುದೇವಾ (ಕೊಂಕಣಿ) ರಾಗ: ಮೋಹನ

ಸೇವಾಕರ್ತಾಂ ದೇವಾ ವಸುದೇವಾ ನಂದನ ಅಮಿತುಜಿ।।ಪ।। ಸುಗಂಧುಕಸಿ ಫುಲ್ಲಾಂತು ತೇಲಕಸಿತಿಲಾಂತು। ತಸಿಮು ತು ಜಗತ್ತಾಂತು ಅಸಭೋರ್ನು ಸರ್ವೈತಂತು।।1।। ತುಘೇಲಿಂ ಪಾದ ಕಮಲ ಸರ್ವೈ ಲೋಕಾಂಕಮೂಲ ಶಾಶ್ವತ್ ಸುಖ ವಿಮಲ ತಜ್ಜೆ ಪೂಜನಾಂಚಿ ಫಲ।।2।। ಆಜಿ ಫಲ ಘಾಯಿ ಮಲ ಪರಸರ್ವೈಜತ್ತಾಜಲ ಅಖಿಳ ಪ್ರಪಂಚಜಾಲ್ ದೇವಾ ತುಘೇ ಲಿಂದ್ರಜಾಲ್।।3।। ಭಕ್ತಾಂಕ ತುಂ ಸರ್ವೈ ದಿಂ ಚೋ ಸರ್ಪಮು ತುಘೇಲೋ ಮಂಚೋ ತುಪ್ಫೇಲೇ ತತ್ವ ಜಾಣ ಜಂಚೋ ಮನೀಷುಲೋಕಾಂತು ಖೊಂಚೋ।।4।। ದೇವ ಸರ್ವೈ ತುಫ್ಫೇಲ್ ಭೃತ್ಯ ಸೇವಾ ಕರ್ತಾಯ್ ತುಕ್ಕ ನಿತ್ಯ ತುಜ್ಜೇರೂಪಸ್ನೇಹೂ ಸತ್ಯಾಧೀನರಕ್ಷಾ ತುಫ್ಫೇಲ್ ಕೃತ್ಯ।।5।। ತುಫ್ಫೇಲೇ ನಾಮಸ್ಮರಣ ಸರ್ವದುಃಖ ಹರಣ ತುಂಚ್ಚಿಮು ಅಂಕಾ ಶರಣಾ ಸ್ವಾಮಿಕರಿ ರಕ್ಷಣಾ।।6।।

## ರೂಪಕ

### ಉತ್ತಮೋತ್ತಮನಾದ (ಭರತಪ್ರೇಮ) ರಾಗ: ಕುರಂಜಿ

ಉತ್ತಮೋತ್ತಮನಾದ ವಿಶ್ವಾಮಿತ್ರನು ಬಂದ ಅಯೋಧ್ಯಾನಗರಿಗೆ। ಸತ್ಕರಿಸಿ ಪೀಠದಲಿ ಕುಳ್ಳಿರಿಸಿ ಉಪಚರಿಸಿ ಕರಮುಗಿದನು ರಾಜ ದಶರಥನು। ಯಾಗವನು ಸಾಧಿಸಲು ರಾಮಲಕ್ಷ್ಮಣರನ್ನು ಕಳುಹಬೇಕೆಂದೆನುತ ಮುನಿವರನು ನುಡಿದ। ನಡುಗಿದನು ತಲ್ಲಣಿಸಿ ಬರಸಿಡಿಲು ಬಡಿದಂತೆ ಈ ನುಡಿಯ ಕೇಳಿ ರಾಜ ದಶರಥನು ಪೂಜೆಗೊಳಲು ರಾಮ ಬರುವನೆಂದು ಶಬರಿ ಕನ್ಯೆ ಹಾದಿ ನೋಡುತಿದ್ದಳು। ಜನಕನಾಜ್ಞೆಯ ಪಾಲಿಸೆ ರಘುಕುಲೋತ್ತಮ ರಾಮ ಭರತನೇ ರಾಜ್ಯವಾಳಲೆಂದು ವನವಾಸ ಕೈಗೊಂಡು ಸೀತಾಲಕ್ಷ್ಮಣ ಸಹಿತ ಅಯೋಧ್ಯೆಯ ತೊರೆದ ಕರುಣಾಮೂರ್ತಿ ಶ್ರೀರಾಮನ ನೋಡಲು ಭರತನು ಶೋಕದಿ ಬಂದ ಸೀತಾರಾಮರ ಚರಣಕೆ ನಮಿಸುತ ಇರುವೆನು ನಿಮ್ಮಯ ಸಂಗಡವೆನುತ ರಾಮನು ಭರತನನಾಲಂಗಿಸಿ ಪೇಳಿದ ಮರಳು ಅಯೋಧ್ಯೆಯ ಪುರಜನರೆಡೆಗೆ। ರಾಮ ರಾಮ ಶ್ರೀರಾಮ ಎನ್ನುತ ಶಿರದಲಿ ಪಾದುಕೆ ಧರಿಸುತ ನಡೆದ ರಾಮರಾಮ ಶ್ರೀರಾಮ ಎನ್ನುತ ರಾಮ ರಾಮ ಜಯರಾಜಾರಾಮ ಎನ್ನುತ।।

### ಕಮಲದಳ ಲೋಚನ (ಕೃಷ್ಣಲೀಲೆ) ರಾಗ:ರಾಗಮಾಲಿಕೆ

**(ಕೃಷ್ಣನ 8 ಅವತಾರಗಳನ್ನು ಹೊಗಳುತ್ತಾ ಗೋಪಸ್ತ್ರೀಯರು ಬರುತ್ತಿರುವುದು.)**

ಕಮಲದಳ ಲೋಚನ। ಭವತರಣಾ। ಕಾಮಿತ ಫಲದಾಯಕ ಶ್ರೀ ರಮಣ।।ಪ।। ನಿಗಮಗಳನ್ನು ಕದ್ದ। ನೀಚ ಸೋಮನ ಕೊಂದು। ಜಗದಲಿ ಮೆರೆದನು ಮೀನಾವತಾರ।।1।। ಪಾಲಕಡಲಿನಲಿ। ಕಡೆಯಲು ಮಂದರ। ಶೈಲವ ಹೊತ್ತಿದ ಕೂರ್ಮಾವತಾರ। ಭೂರಮಣೀಯಳ ಆರ್ತದ ಮೊರೆ ಕೇಳಿ ಹಿರಣ್ಯಾಕ್ಷನನು ಕೊಂದ। ಬಾಹುಬಲ ಸಾಹಸ

ವರಹಾವತಾರ॥2॥ ಪ್ರಹ್ಲಾದನನು ಕರುಣಿಸೀ। ಹಿರಣ್ಯಕಶ್ಯಪನ ಅಡಗಿಸಲು। ಕಂಬದಲಿ ಹೊರಬಂದ ನರಸಿಂಹ। ಅವತಾರ ಬಲಿಗರ್ವ ವಡಗಿಸಿ। ವಟುರೂಪಿಲೀ ತಾಪಸರ ಭೂಸುರರ ಕಾಪಾಡಿದಾತ। ವಿಕ್ರಮ ದೀಪ ವಾಮನ ರೂಪ॥3॥ ಇಳೆಯಕ್ಷತ್ರ ಕುಲವನ್ನು ಸದೆಬಡೆಯುತಾ। ದುರ್ಮದ ಕ್ಷತ್ರ ಕುಲವನ್ನು ಸದೆ ಬಡಿಯುತಾ। ಅವನಿ ಜಮದಗ್ನಿ ತನಯಾನೆಂದು। ಜನ್ಮೀಸಿ ಧರೆಯೊಳು ಗುಣಧಾಮ। ಭಾರ್ಗವರಾಮ॥4॥ ಪಿತೃವಾಕ್ಯ ಪರಿಪಾಲಕ ರಘುಕುಲ ಸೋಮ ಶ್ರೀರಾಮ। ದಶರಥ ರಾಮ। ದಾನವ ಭೀಮ ಆಶ್ರಿತ ವಿನುತ ಕಲ್ಯಾಣ ಸೀತಾರಾಮ॥5॥ ಚಿನ್ಮಯ ರೂಪನು। ಮುರುಳಿಯ ನೂದುತಾ। ಮರುಳನು ಮಾಡುತ ಭಕುತರನೂ। ಗೆಜ್ಜೆಯು ಅಂದಿಗೆ ಘಲುಘಲು ನಾದದಿ। ಮೂರ್ಜಗವನು ಮೆರೆದು। ಆಡುತಲಿ ಪಾಡುತಲಿ ಹರಿಗೋಕುಲ ಬಾಲಕನೇ॥6॥ ಕೃಷ್ಣಾ ಕೃಷ್ಣಾ॥ ಕೃಷ್ಣಾ॥ (ಕೃಷ್ಣನನ್ನು ನೆನೆಯುತ್ತಿರುವಾಗಲೇ ಕೃಷ್ಣನು ಕಾಣಿಸಿಕೊಳ್ಳುವನು. ಅವನು ಬರುವುದರೊಳಗಾಗಿ ಮರೆಯಾಗಲು ಹೋಗುವರು.)

**ಗೋಪಸ್ತ್ರೀಯರು** **ರಾಗ: ವಸಂತ**

ಬರುವನದೋ ಕೃಷ್ಣ। ಮರೆಯಾಗುತ ಪೋಗುವಾ। ಮುರುಳಿಯನೂದಿ ತರುಣಿಯರಾ। ಮನಗಳನಪಹರಿಸುವಾ॥ ಮನದಿ ನೆನೆವರೆದುರಲೀ। ಕಿರುನಗೆಯನು ಬೀರುತಾ। ಮನಕೆ ಹರುಷವೀಯುತಾ। ಮುದದಿ ತಾನು ನಲಿಸುತಾ। ಅನುದಿನದಲಿ ಭಜಿಸುವಾ। ಮನು ಮುನಿಗಳಿಗೊಲಿಯುತಾ। ಘನ ಕುಣಿಯುತ ತನುಮನಗಳ। ಒಲಿಸಿ ನಲಿಸಿ ಹರಸುವಾ॥ (ಗೋಪಸ್ತ್ರೀಯರು ಮರೆಯಾಗಲು ಬಿಡದೆ ಕೃಷ್ಣನು ಎದುರಿಗೆ ಬಂದು ಅಡ್ಡಗಟ್ಟುವನು)

**ರಾಗ: ಧನ್ಯಾಸಿ**

**ಕೃಷ್ಣ:**–ಬಾರಯ್ಯ ಗೆಳೆಯನೆ। ಪಾಲನು ತರುತಿಹ ನಾರಿಯರನು ಕೇಳಿ। ಕುಡಿಯುವ ನಾವು॥

**ಗೆಳೆಯ:**–ಬೇಡಯ್ಯ ಕೃಷ್ಣಯ್ಯ। ನಾರಿಯರ ಸಂಗ। ಜೋಡಿಸಿ ಕರಗಳ। ಮುಗಿಯುವೆನೂ ರಂಗ॥

**ಕೃಷ್ಣ:**–ಕೇಳಿದ ಪಾಲನು। ಕೊಡದಿರೆ ಅವರು। ಧಾಳಿಯ ಮಾಡುತ। ಕುಣಿಸುವೆನೂ। ಕುಲುಕುತ ಬಳುಕುತ। ಚಲಿಸುವ ಚೆಲುವೆಯರ। ಒಲಿಸುತ ಮನಗಳ ತಣಿಸುವೆನೂ॥

**ಗೆಳೆಯ:**–ಕುಣಿಸಲು ಅವರನು ಥಳಿಸುವರ್ನಿನ್ನನ್ನು। ಕೆಣಕಲು ಬೇಡವೋ ಪರಿಪರಿ ಬೇಡುವೆ। ಸೆಣಸದೆ ಸುಮ್ಮನೆ ನಡೆಮನೆ ಕಡೆಗೆ। ಮಣಿಯುತ ಬೇಡುವೆ ಮುರಳಿಧರನೆ॥ (ಗೋಪಸ್ತ್ರೀಯರಿಗೂ ಮತ್ತು ಕೃಷ್ಣನಿಗೂ ವಾದವಿವಾದ)

**ರಾಗ:– ಅಠಾಣ**

**ಕೃಷ್ಣ:**– ಏತಕೆ ಹೊರಟಿರಿ। ಭಾಮಿನಿ ಮಣಿಯರೆ। ಈತರ ಮೌನವು। ತರವೇನಿರೆ। ಪಾಲು ಮೊಸರು ಬೆಣ್ಣೆ। ಕೊಡಿರೆನಗೀಗಲೆ। ವೇಳೆಯು ಮಾಡದೆ। ಒಮ್ಮತದಿಂದಲಿ। ಪಾಲನು ಕುಡಿಯುತ। ಲೀಲೆಯ ತೋರುವೆ। ಆಲಿಸಿ ಎನ್ನಯ। ಮಾತನು ರಮಣಿ॥

**(ಬೆಣ್ಣೆಯ ಮಡಿಕೆಗೆ ಕೈ ಹಾಕುವನು)**

**ಗೋಪಸ್ತ್ರೀಯರು:–** (3ಜನ) ಬಿಡು ಬಿಡು ಕೃಷ್ಣ ದಾರಿಯನೀಗ। ತಡೆಯಲೊ ಬೇಡವೊ। ಪೋಗುವೆವು ಈಗ। ತಂಬಿದ ಬೆಣ್ಣೆಯ ಗಡಿಗೆಯ ನೋಡಿದೆಯಾ। ದೊಂಬಿಯ ಸೇರಿಸಿ। ಬೆಣ್ಣೆಯ ಕದಿವೆಯಾ। ಜಂಬವ ತೋರುತ। ಬಂದಿಹೆಯಾದರೆ। ಕಂಬಕೆ ಬಿಗಿದು ನಿಮ್ಮಮ್ಮಗೆ ಪೇಳುವೆ॥

**ಕೃಷ್ಣ:–** ಅಂಬುಜ ನಯನೆ ಡಂಬವು ಬೇಡವೆ। ಕುಂಭದಿ ಇರುವ ಬೆಣ್ಣೆಯ ನೀಡೆ। ಕಂಬಕ್ಕೆ ಬಿಗಿಯಲು ಬಂದರೆ ನಿನ್ನ। ಚುಂಬಿಸಿಕೆನ್ನೆಯ ಕಳುಹುವೆ ಮುನ್ನ॥

**2ನೇ ಗೋಪಿ:–** ಪಾಲನು ಕೊಡೆನು। ದೇವರ ಮೀಸಲು। ನಾಳೆಗೆ ಎಮ್ಮಯ ಮಂದಿರಕೆ ಬಾ। ಖಾಲಿಯ ಮಾಡದೆ। ಪಾಲನು ಕೊಡುವೆ। ಲಾಲಿಸಿ ನುಡಿಯನು। ದಾರಿಯ ಬಿಡು ನೀ॥ ಬಿಡು ಬಿಡು ಕೃಷ್ಣ। ದಾರಿಯ ನೀಗ। ತಡೆಯಲು ಬೇಡವೋ ಪೋಗುವೆವು ಬೇಗ॥

**ಕೃಷ್ಣ:–** ದೇವರ ದೇವನು ನಾನಾಗಿಹೆನು। ಭಾವಿಸಿ ನಿನ್ನಯ ಮನದೊಳು ಕೇಳು। ಕಾಯಿಸಿ ಕಮ್ಮಗೆ ಇರುತಿಹ ಕ್ಷೀರವ। ಈಯುತ ಎನಗೆ ಸಂತಸ ನೀಡೆ।। ಏತಕೆ ಹೊರಟಿರಿ ಭಾಮಿನಿ ಮಣಿಯರೆ।

**3ನೇ ಗೋಪಿ:–** ಮೊಸರನು ಕೊಟ್ಟರೆ ಬಯ್ವಳೆನ್ನತ್ತೆಯು। ಕುಶಲದಿ ಎಮ್ಮನು ಕಳುಹೈ ಕೃಷ್ಣನೆ। ಕೊಸರುತ ಈ ಪರಿ ಕಾಡಲುಬೇಡವೋ। ಹಸುವಿನ ಮೊಸರನು ಮನೆಯೊಳಗೀವೆನು। ಬಿಡು ಬಿಡು ಕೃಷ್ಣ ದಾರಿಯನೀಗ। ತಡೆಯಲು ಬೇಡವೊ। ಪೋಗುವೆವು ಬೇಗಾ।।

**ಕೃಷ್ಣ:–** ಬಿಟ್ಟರೆ ಸಿಕ್ಕರು ಠಕ್ಕರು ನೀವು। ಕೊಟ್ಟರೆ ಈಗ ಬಿಡುವೆನು ಹಾದಿ। ಹಟ್ಟಿಗೆ ಬಾ ಎಂದೆನುತಲಿ। ಪೇಳುತ ತಟ್ಟುತ ಕೆನ್ನೆಗೆ ಕಳುಹುವಿರಿ। ಏತಕೆ ಹೊರಟಿರಿ ಭಾಮಿನಿ ಮಣಿಯರೆ।।

**3 ಜನ ಗೋಪಸ್ತ್ರೀಯರು:–** ಠಕ್ಕರು ನಾವೆಂದು ತಿಳಿಯಲಿ ಬೇಡವೊ। ಸಿಕ್ಕಿಗೆ ಎಮ್ಮನು ಸಿಲುಕಿಸ ಬೇಡವೋ। ಒಕ್ಕೊರಲಿಂದಲಿ ಬೇಡುವೆವ್ ದೇವ। ಅಕ್ಕರೆಯಿಂದಲಿ ಕಳುಹೈ ಎಮ್ಮನು। ಬಿಡು ಬಿಡು ಕೃಷ್ಣ ದಾರಿಯನೀಗ। ತಡೆಯಲು ಬೇಡವೋ ಪೋಗುವೆವ್ ಬೇಗ।।

(ಕೃಷ್ಣನು ಹಾಲು, ಮೊಸರು, ಬೆಣ್ಣೆ ಗಡಿಗೆಗಳನ್ನು ಕಿತ್ತು ಕೊಳ್ಳುವನು ಆಗ ಗೋಪಸ್ತ್ರೀಯರು ಯಶೋಧೆಗೆ ಹೇಳಲು ಹೋಗುವರು)

**ಗೋಪಸ್ತ್ರೀಯರು:–** ಬಾಲೆಯರೆ ಬನ್ನಿ ಮುದದಿ ಬೇಗ ಪೋಗುವಾ। ಲೋಲನೇತ್ರೆ ಗೋಪಿಯ ಬಳಿ ದೂರು ಪೇಳುವಾ। ಹಾಲುಮೊಸರು ಬೆಣ್ಣೆಗಳನು ಲೂಟಿಮಾಡಿದಾ। ಕೇಳಲೆಂದು ಪಿಡಿಯಲೀಗ ಓಡಿಪೋದನೆ।। ಕೃಷ್ಣ ಓಡಿ ಪೋದನೆ।। (ಕೃಷ್ಣನು ಮನೆಗೆ ಬರಲಿಲ್ಲ ವೆಂದು ಯಶೋಧೆಯು ಯೋಚಿಸುತ್ತಿರುವಳು)

**ರಾಗ:– ಸುರಟಿ**

ಬಾರಯ್ಯ ಕಾಣೆನು ರಂಗಯ್ಯನೆ। ತೋರಯ್ಯ ಮೊಗವನು ಕೃಷ್ಣಯ್ಯನೇ। ದಶರಾತ್ರಿ ಸಮಯದಿ ಸ್ತನ್ಯ ನೀಡಲು ಬಂದ ಅಸುರೆಪೂತನಿನೆತ್ತ। ನೊಸರುತ ನೀ ಕೊಂದೆ। ಬಾಲಕ ತನದಲಿ। ಲೀಲೆಯ ತೋರಿದೆ। ಏಳು ಜನ್ಮದ ಪುಣ್ಯ ನೋಡುವ ಫಲವಿದು।।

(ಕೃಷ್ಣ ಬರುವನು) **ರಾಗ: ಮೋಹನ**

ಕೃಷ್ಣ:- ಏತಕೆ ಕರೆದೆಯೆ ಮಾತೆಯೆ ಪೇಳೆ। ಪ್ರೀತಿಯ ತೋರುವ ದಾತೆಯೆ ಪೇಳೆ। ಅಣ್ಣನ ಒಡಗೂಡಿ ಬಾಲಕರೊಡನಾಡಿ। ಚಿಣ್ಣೆಯ ದಾಂಡನು ಆಡುತಲಿದ್ದೆನು। ಗೋವಳರೊಡಗೂಡಿ ಬೃಂದಾವನದಲ್ಲಿ। ಗೋವ್ಗಳ ಕಾಯುತ ಆಡುತಲಿದ್ದೆನು।। (ಕೃಷ್ಣನನ್ನು ಬಾಚಿ ಎತ್ತಿಕೊಳ್ಳುವುದಕ್ಕೆ ಹೋಗುವಳು)

**ಯಶೋಧೆ:–** ಬಾರೆನ್ನ ಕಂದನೇ। ಕುಣಿಯುತ ನಲಿಯುತ। ತೋರುನಿನ್ನಾ ಲೀಲಾನಂದ ಮೃದುಭಾಷಿತೆ। ಮಧು ಸುರಿಸುತೆ। ಮಂದಹಾಸವದನೇಂದುವಿನಂದದಿ।। (ಕೃಷ್ಣನನ್ನು ಹತ್ತಿರಕ್ಕೆ ಕರೆದುಕೊಂಡು ಮಲಗುವಂತೆ ಹೇಳುವಳು)

**ರಾಗ: ಮಧ್ಯಮಾವತಿ**

**ಯಶೋಧೆ:–** ಲಾಲಿಯ ಹಾಡವೆ ಬಾರಯ್ಯ ರಂಗಯ್ಯ। ಪಾಲನು ಕುಡಿದು ನೀ ಮಲಗಯ್ಯ। ಬಾಲಕರೊಡಗೂಡಿ ಪರಿಪರಿಆಲೆದಾಡಿ। ಲೀಲೆಯ ತೋರುತ ನೀ ಬಳಲಿರುವೇ।। ನಿದುರೆ ಯಿಂದೇಳಲು। ಮೊಸರವಲಕ್ಕಿಯಾ ಮುದದಿಂದ ನೀಡುವೆ। ಬಾರೋ ಕೃಷ್ಣಯ್ಯಾ। ಹದವಾಗಿ ಕಾಸಿದ ಕೆನೆಹಾಲು ಮೊಸರನು। ಕದಳಿ ಖರ್ಜೂರ ಮಧುವನು ಕೊಡುವೆನು।। (ಕೃಷ್ಣನನ್ನು ಮಲಗೆಂದು ಹೇಳುತ್ತಿರುವಾಗಲೇ ಗೋಪಸ್ತ್ರೀಯರು ದೂರನ್ನು ಹೇಳಲು ಬರುವರು)

**3 ಜನ ಗೋಪಿಯರು:–** ಏನಲೆ ಗೋಪಿ ತಾಳಲು ಆಗದು। ನಿನ್ನಯ ಮಗನ ಹಾವಳಿಯ।। ಮಾನಿನಿ ಮಣಿಯರ ಮನಗಳ ಚಲಿಸುವ ನಿನ್ನಯ ಮಗನಾ ಚೇಷ್ಟೆಯಾ।।

**1ನೇ ಗೋಪಿ:–** ಬೆಣ್ಣೆಯ ಮಾರಲು ಪೋಗಲು ನಾನು। ಕಣ್ಣನು ಮುಚ್ಚಲು ಬಂದಿಹನು। ಬೆಣ್ಣೆಯ ತಿಂದು ಗಲ್ಲಕೆ ಬಡಿದು ಕೆನ್ನೆಗೆ ಸವರುತ ಓಡಿದನು।।

**2ನೇ ಗೋಪಿ:–** ದೇವರ ಮೀಸಲ ಪಾಲಿನ ಮಡಿಕೆಯ। ಧಾವಿಸಿ ಕೋಲೊಳು ರಂಧ್ರವ ಮಾಡಿ। ಪಾಲನು ಕುಡಿಯುತ

ನಲಿನಲಿದಾಡುತ। ಹೇಳದೆ ಓಡಿದ ಕಳ್ಳನು।।

**3ನೇ ಗೋಪಿ:–** ಮೊಸರನು ಮಾರುತ ಬರುತಿಹ ದಾರಿಗೆ। ಕೆಸರನು ತುಂಬಿದಾ ನಸುನಗುತಾ। ಕೊಸರು ಕೊಡು ಮೊಸರೆನುತಲಿ। ತಾನು ಕೆಸರನು ಸೀರೆಗೆ ತಾ ಬಳಿದಾ।।

**ಯಶೋಧೆ:–** ಗೊಲ್ಲರ ಮನೆಗೆ ಪೋಗದಿರೋ। ಪುಲ್ಲಜನೇತ್ರೇರು ದೂರುವರೋ।। ನಿಲುವಿನ ಮೇಲಿದ್ದ ಪಾಲು ಚೆಲ್ಲಿದನೆಂದು।ಲಲನೆಯರೆಲ್ಲರು ದೂರುವರೊ।। ಮೊಸರು ಮಡಿಕೆಯಲ್ಲಿ ಕೆಸರು ತುಂಬಿದನೆಂದು। ಕುಸುಮಾಂಗನೆಯರು ದೂರುವರೊ।। ಚಿನ್ನಿಗಾರ್ತಿಯರೆಲ್ಲ ಬೆಣ್ಣೆಯು ಕದ್ದನೆಂದು। ಬಣ್ಣಿಸಿ ನಿನ್ನನು ಬಯ್ಯುವರಲ್ಲೋ। ಚಿನ್ನಿ ಕೃಷ್ಣಯ್ಯನೇ। ಅಣ್ಣನ ಒಡಗೂಡಿ ಕಣ್ಣು ಮುಂದಾಡುತಿರೋ ರಂಗಾ।।(ಗೊಲ್ಲರ ಮನೆಗೆ ಹೋಗಬೇಡವೆಂದು ಹೇಳುತ್ತಿರುವಾಗಲೇ, ಮತ್ತೆ 3 ಜನ ಗೋಪಸ್ತ್ರೀಯರು ಬರುವರು).

**ಗೋಪಸ್ತ್ರೀಯರು:–** ನಿನ್ನ ಮಗನ ಚೇಷ್ಟೆಯನ್ನು ಎಂತು ಪೇಳಲಿ। ಬಣ್ಣಿಸಲು ಆಗದಂತೆ ಮಾಡಿಹನಮ್ಮಾ ।।

**1ನೇ ಗೋಪಿ:–**ಗೊಲ್ಲ ಭಾಮೆಯರೆಲ್ಲ ಸೇರಿ। ಜಲದಿ ಕ್ರೀಡೆಯಾಡುವಾಗ। ಕಳ್ಳತನದಿ ಸೀರೆಕದ್ದು ಮರವನೇರಿದಾ।।

೨ನೇ ಗೋಪಿ:–ಹಾಲು ಕರೆಯಲೆಂದು ನಾನು। ಕರುವ ಬಿಡಲು ಪೋಗುವಾಗ। ಹಾಲನೆಲ್ಲ ಕರುವಿಗಿಂತ ಮುಂಚೆ ಕುಡಿದನೆ।।

**3ನೇ ಗೋಪಿ:–** ಅಡಿಗೆ ಮನೆಯಲಿರಲು ನಾನು। ಒಡೆದು ಗಡಿಗೆಯನ್ನು ತಂದು। ಕಡೆದ ಬೆಣ್ಣೆ ಮುದ್ದೆಯನೆಲ್ಲ ಸೂರೆಗೈದನೇ।। (ಕೃಷ್ಣನು ಗೋಪಸ್ತ್ರೀಯರನ್ನು ಮೂದಲಿಸುವನು।)

**ಕೃಷ್ಣ:–** ಯಾರು ತಿಳಿಯರಿವರಾ ಚರಿತೆಯ। ಯಾರು ತಿಳಿಯರು। ಕಡೆದ ಬೆಣ್ಣೆಯ ಕೊಡುವೆನೆನುತಲಿ। ಸಡಗರಾದರದಲಿ ಕರಗಳ ಪಿಡಿದು। ಬಿಡದೆ ಕೆನ್ನೆಗೆ ಕೆನ್ನೆಯನೊತ್ತಿ। ರಮಿಸುತಲಿ ಭ್ರಮಿಸುತಲೀ ಜರಿವಳು।।1।। ಮೊಸರು ಕೊಡುವೆನೊ। ಭರದಿ ಬಾರೆಂದು। ಪುಸಿಯನಾಡುತ ಕರೆದಳು ಬಳಿಗೆ। ನುಸುಳಿ ಹೋಗಲು ಎನ್ನನ್ನು। ಬಿಡದೆ ಸನಿಹಕೆ ಬಾ। ಸರಸಕೆ ಬಾ ಎಂದಳು।।2।।

ಪಾಲ ನೀಯುವೆ। ಬೇಗ ಬಾರೆಂದು। ಲೋಲೆ ಇವಳು ತಾ ಕಣ್ಣನು ಹೊಡೆದು। ಪಾಲನೀಯದೆ। ಆಲಂಗಿಸುತಾ ಕಳುಹಿದಳೀಗೆನ್ನನು ಜರಿವಳು।।3।।

(ಯಶೋಧೆಯು ನಮ್ಮ ಕೃಷ್ಣನು ಒಳ್ಳೆಯವನೆಂದು ಗೋಪಸ್ತ್ರೀಯರಿಗೆ ಹೇಳುವುದು)

**ಯಶೋಧೆ:–** ನನ್ನ ಮಗನಿಗಾರು ಸಾಟಿಯೇ। ದಿನದಿನದಿ। ಗೋಕುಲದಿ। ಬೆಳಗುತಿಹ ಜ್ಯೋತಿಯಂತೆ।। ಮನೆ ಮನೆಯ ತಿರುಗಿಹನೇ? ನವನೀತ ತಿಂದಿಹನೆ? ನಿಲುವಿನಲಿ ಮಡಕೆಯನು ತಾನೊಡೆದು ಬಂದಿಹನೆ? ಸುಮ್ಮನೆಯೆ ದೂರುವಿರಿ ಎನ್ನಯ ಕೃಷ್ಣಯ್ಯನ। ಚಿನ್ಮಯನ ಗುಣವ ನೀವು। ಪರಿಗಣಿಸುವಿರೇನೆ? ಅರಿಯದವ। ಬಾಲನಿವ। ಜಡೆಹಿಡಿದು ಎಳೆಯುವನೇ? ಬೆಳೆಯುತಿಹ। ತರಳನಿವ। ಸೆರಗನ್ನು ಎಳೆಯುವನೆ? ನಿಮ್ಮಗಳ ದೂರುಗಳ ಕೇಳಲಾರೆ ಅಮ್ಮಯ್ಯ। ಚಿನ್ಮಯ ಕೃಷ್ಣಯ್ಯನ ದೂರಬೇಡಿ ದಮ್ಮಯ್ಯ।। ಕರುಣದಲಿ ಬೇಡುವರ ಕನಿಕರಿಸಿ ಒಲಿಯುವನು। ಕಾಣದಲೆ ಕಾಯುವನು ಎಡಬಿಡದೆ ಇರುತಿಹನು। ಪೊಳ್ಳುಮಾತನಾಡದಿರಿ ಎನ್ನ ಮಗನ ಜರೆಯದಿರಿ।। ಒಳ್ಳೆಯ ಮಾತಿನಿಂದ ಬುದ್ಧಿ ಪೇಳ್ವೆ ಮನೆಗೆ ಹೋಗಿರಿ।। (ಗೋಪಸ್ತ್ರೀಯರು ಹೊರಟು ಹೋಗುವರು)

**ಯಶೋಧೆ:–** ಬುದ್ಧಿ ಮಾತು ಹೇಳಿದರೆ ಕೇಳಬೇಕಯ್ಯ ಕೃಷ್ಣ। ಗದ್ದಲವ ಮಾಡಲಿಕೆ ಪೋಗಬೇಡಯ್ಯ। ಗೊಲ್ಲತಿಯರ ಮಂದಿರಕೆ ಹೋಗಬೇಡಯ್ಯ। ಕೃಷ್ಣ ಚೆಲ್ಲಿ ಹಾಲ ಮೊಸರನೆಲ್ಲ ತಿನ್ನಬೇಡಯ್ಯ। ಕಳ್ಳನಂತೆ ಬೆಣ್ಣೆಯನ್ನು ಕದಿಯ ಬೇಡಯ್ಯಾ। ಒಳ್ಳೆ ಹಾಲು ಮೊಸರು ಬೆಣ್ಣೆ ನೀಡುವೆನಯ್ಯಾ।।1।। ಕೇಳಿದಷ್ಟು ಹಾಲು ಮೊಸರು ಮನೆಯಲಿಲ್ಲ ವೇನಯ್ಯಾ। ಹೇಳಿದಂತೆ ಯಾರ ಮನೆಗೂ ಹೋಗಬೇಡಯ್ಯಾ। ಬಾಲಕಿಯರ ಅಡ್ಡಗಟ್ಟಿ ಕೆಣಕಬೇಡಯ್ಯಾ। ಬಾಲರೊಡನೆ ಸೇರಿಕೊಂಡು ಆಟವಾಡಯ್ಯಾ।।2।।

**ಕೃಷ್ಣ:–** ಆಟಕೆ ಪೋಗುವೆನೊ। ಕೇಳಮ್ಮಾ ಆಟಕೆ ಪೋಗುವೆನೊ। ಅಣ್ಣನ ಒಡಗೂಡಿ ಚೆಣ್ಣೆಯನಾಡುತ।

ಆನಂದದಿಂದಾ ಚಿಣ್ಣಿಯ ಕೊಡು ಎಂದು। ಬಣ್ಣಿಸಿ ಬೇಡುವೆ ಮನ್ನಿಸಿ ನೀ ಎನ್ನ ಕಳುಹಮ್ಮಾ ।। (ಆಟಕೆ ಹೋಗುವನು) (ಸ್ವಲ್ಪ ಹೊತ್ತನಲ್ಲಿಯೇ ಕೃಷ್ಣನು ಮಣ್ಣು ತಿಂದನೆಂದು ದೂರು ಬರುವುದು।)

**ಗೆಳೆಯ:–** ಮಣ್ಣು ಮುಕ್ಕಿ ತಿಂದನಮ್ಮ । ತುಂಟ ಕೃಷ್ಣನು।। ಕಣ್ಣು ತಪ್ಪಿ ಓಡಿ ಬಂದ। ನಮ್ಮ ಕೃಷ್ಣನು। ಚೆಂಡು ದಾಂಡು ಆಡಲೆಂದು। ಮಂದಿಯೆಲ್ಲ ಕೂಡಿರಲು ಮಂಡಿ ಊರಿ ಬಗ್ಗಿ ತಾನು। ಸವಿಯುತ್ತಿದ್ದನೂ। ಕಂಡು ಪೇಳಲೆಂದು ನನ್ನ ಕಾಲಿನಿಂದ ಬೀಳಿಸುತ್ತಾ। ಗುಂಡಿ ನಾಟ ಆಡುತ್ತಿದ್ದೆ ಎಂದು ನುಡಿದನು।

**ಯಶೋಧೆ:–** ಮಣ್ಣೇಕೆ ತಿಂದೆ ನೀನು। ಚಿನ್ನಾರಿ ರೂಪನೆ ನಿನಗೆಂತು ಪೇಳಲಯ್ಯ। ನನ್ನ ಮುದ್ದು ಕೃಷ್ಣಯ್ಯ। ಮನೆ ಮನೆಯ ಲೂಟಿಮಾಡಲೆಂದು ಪೋಗಬೇಡಯ್ಯಾ। ಕೊಡುವೆನು ಪಾಲು ಬೆಣ್ಣೆ ಮೊಸರು ಎನ್ನ ಕಂದಯ್ಯಾ। ಘಲ್ಲೆನು ತಾ ಘಲ್ಲುಘಲ್ಲೆನುತಾ। ಕುಣಿಯುತ ಬಾ ನಂದ ಕುಮಾರ। ಜಗದೇಕ ಮೋಹನಾಕಾರ। ಗೋಪಕಿಶೋರ। ಬಾಡಿದ ಮೊಗದಿ ನಿಂತ। ನಿನ್ನ ನೋಡಲಾರೆನು। ಬಾಯನ್ನು ತೆರೆದು ತೋರೋ। ಎನ್ನ ಮುದ್ದು ಬಾಲನೆ। ಎನ್ನ ಮುದ್ದು ಕಂದನೇ। ನಿನ್ನ ಲೀಲೆಯೆಂತು ಬಣ್ಣಿಸಲಿ ಬಾಲಗೋಪಾಲ। ಬಾಲ ಲೀಲಾ। ಬಹು ವಿಧವಿಧದಿ ನಟನೆಗೈದ। ಬಾಲಕೃಷ್ಣನೇ। ಘಲ್ಲೆನುತಾ ಘಲುಘಲ್ಲೆನುತಾ ಕುಣಿಯುತಾ। ಬಾ ನಂದ ಕುಮಾರ ಜಗದೇಕ ಮೋಹನಾಕಾರ ಗೋಪಕಿಶೋರ।।

(ಕೃಷ್ಣನು ಬಾಯನ್ನು ತೆರೆದು ತನ್ನ ತಾಯಿಗೆ ತೋರುವನು ಯಶೋದೆ ಅದರಲ್ಲಿನ ವಿಶ್ವರೂಪವನ್ನು ಕಂಡು ಆಶ್ಚರ್ಯ ಪಡುವಳು।)

**ರಾಗ:– ಹಿಂದೋಳ**

**ಯಶೋಧೆ:–** ಏನಿದಚ್ಚರಿ ಕೃಷ್ಣ। ಏನಿದೀ ಅದ್ಭುತವೂ ಕಾಣಲಾಗದೆ ಕಂಗಳು ಚಲಿಸುತಿಹವು। ನೀನು ಮಾನವನಲ್ಲ ಜ್ಞಾನ ಜ್ಯೋತಿಯು। ನೀನು ದೀನ ವತ್ಸಲನೆಂದು। ಲೋಕ ಸಾರುತಿದೆ।

**ಹಾಡು:–** ಸಾಕು ಗೊಳಿಸಯ್ಯ। ಈ ವಿಶ್ವರೂಪ। ನಾಕವೆ ತೋರುತಿದೆ। ಲೋಕದ ನಾಯಕ। ನೀನೆನಿಸಿದೆ ಮನ ವ್ಯಾಕುಲ ಹರಿಸೊ ಗೋವಿಂದಾ। ಪರಿ ಪರಿ ಚೋದ್ಯವು ತೋರಿದೆ ಬಾಯೊಳು। ಅರಿಯದೆ ಮಹಿಮೆಯು। ಈ ಜಗದಲ್ಲಿ। ಹರುಷವ ತೋರೋ। ಎನ್ನ ಮನದೊಳು ಕರುಣದಿ ಬೇಡುವೆ। ನಿನ್ನಯ ಪದದೊಳು।। (ವಿಶ್ವರೂಪವನ್ನು ಶಾಂತಗೊಳಿಸುವನು)

ಕೃಷ್ಣನ ವಿಶ್ವರೂಪವನ್ನು ಶಾಂತಗೊಳಿಸುವ ವೇಳೆಗೆ, ಗೊಲ್ಲರ ಹುಡುಗರು ಕಾಳಿಂದಿ ನದಿಯಲ್ಲಿ ಗೋವುಗಳು ನೀರು ಕುಡಿದು ಎಲ್ಲವೂ ಮೂರ್ಛೆ ಹೊಂದಿರುವುದನ್ನು ಹೇಳುವರು।

**ಹುಡುಗರು:–** ಕಾಯಲು ಬಾರೋ ಕೃಷ್ಣಾ ಕಾಳಿಯ ಬಾಧೆಯ ತಡೆಯೋ।। ಗಣಗಣ ಗಂಟೆಯ ನಾದದಿ ಪಶುಗಳು। ತಿಳಿ ನೀರನ್ನು ತಾ ಕುಡಿಯಲು ಪೋದವು। ಜಲದಾನದಿ ಮತ್ತೇರುತ ಕರುಗಳು ಚಲಿಸದೆ ನೆಲ ಅಪ್ಪಿದವು।।1।।

ಗರಳ ತುಂಬಿಕಾಳಿಂದಿ ನದಿಯಲೀ। ದುರುಳ ಕಾಳಿಂಗನು ಮೆರೆಯುವನೂ। ತ್ವರಿತದಿಂದಲಿ ಗೋಕುಲ ಉಳಿಸೈ। ಪರಿಪರಿ ಎಮ್ಮನು ಸಲಹೈ।।2।।

ಕೃಷ್ಣ:- (ಶ್ರೀಕೃಷ್ಣ ಎಲ್ಲರೊಡನೆ ನದಿಯ ತೀರಕ್ಕೆ ಓಡುವನು।) ಗೆಳೆಯರೀಗ ಬನ್ನಿರಿ। ಯಮುನೆ ತೀರ ಸೇರುವೆ। ದುರುಳ ನಾಗನನ್ನು ಈಗ। ಜವದ ಪುರಕೆ ಕಳುಹುವ।। ಮದದಿ ಮೆರೆವ ನಾಗನ। ಮದವ ನಾನು ಅಡಗಿಪೆ। ಹೆದರಿ ನಿಂತ ಜೀವಿಗಳ। ಒದರಿ ಮುನ್ನ ಕೊಲ್ಲುವೆ।। (ಕೃಷ್ಣನು ನದಿಯಲ್ಲಿ ಮುಳುಗಿ। ಕಾಳಿಂಗನ ಹೆಡೆಯಮೇಲೆ ನಾಟ್ಯವಾಡುತ್ತಿರುವನು। ಯಶೋಧೆ ಗೋಪಸ್ತ್ರೀಯರು ಎಲ್ಲರೂ ಬರುವರು)

(ಕಾಳಿಂಗನ ಪತ್ನಿಯರು ಕೃಷ್ಣನನ್ನು ಕೇಳಿಕೊಳ್ಳುತ್ತಿರುವುದು।)

**ರಾಗ:– ಷಣ್ಮುಖಪ್ರಿಯ**

ಕಾ.ಪತ್ನಿ:- ಮನ್ನಿಸಿ ಸಲಹೈ। ಶ್ರೀ ವಾಸುದೇವ। ಎಮ್ಮಯ ಪತಿಯನು। ಉಳಿಸೈ ದೇವ। ಅರಿಯದೆ ಮದದಿಂದ। ಗರಳವ ಬಿಟ್ಟನು। ಕರುಣದಿ ಸಲಹಯ್ಯ। ಶ್ರೀಯಾದವೇಂದ್ರ। ಶರಣರ ಕಾಯುವ ಭಕ್ತವತ್ಸಲನೆಂದು। ಪರಿಪರಿ ಬೇಡುವೆವ್ ಚರಣದಿ

ನಿಂದು॥

ಕೃಷ್ಣ:- ನಡೆನಡೆ ಕಾಳಿಂಗ ಸಾಗರದೆಡೆಗೆ। ತಡವು ಮಾಡದೆ ನೀ ಕಡಲಿನ ಕಡೆಗೆ। ಸಾಟಿಯು ಯಾರಿಲ್ಲ ಎನ್ನುತ ಮೆರೆದೆ। ಘಾಟಿಯು ನಾನಾಗಿ ಗರ್ವವ ಮುರಿದೆ। ಬಾಚುತ ನಿನ್ನನ್ನು ಪ್ರೀತಿಯ ಗೈದೆ। ಸೂಟಿಯಿಂದಲಿ ನೀ ಬೇಗನೆ ತೆರಳೈ॥

ಕಾಳಿಂಗ:- ಸಾಗರ ಸೇರಲು ಗರುಡನು ಬಿಡನು। ಬಾಗುತ ಬೇಡುವೆ। ಬಾಧೆಯ ನೀಗಿಸೈ। ಭೋಗಿಶಯನ ನಿನ್ನ ಕರುಣ ಕಟಾಕ್ಷದಿ। ಜಾಗರದಿಂದಲಿ। ಎಮ್ಮನು ಕಳುಹೈ॥

ಕೃಷ್ಣ:- ಪನ್ನಗ ಒಡೆಯನೆ। ಚಿಂತಿಪೆ ಏತಕೆ। ನಿನ್ನಯ ಶಿರದೊಳು ಕಾಣುತಲಿರುವ। ಎನ್ನಯ ಪಾದದ ಗುರುತನು ನೋಡುತ। ತಿನ್ನಲು ಬಾರನು ವಿನುತಾ ಸುತನು। ನಡೆನಡೆ ಕಾಳಿಂಗ ಸಾಗರದೆಡೆಗೆ। ತಡವು ಮಾಡದೆ ನೀ ಕಡಲಿನ ಕಡೆಗೆ॥

ಕಾಳಿಂಗ:- ಇದೀಗೋ ಕೃಷ್ಣನೆ ಹೊರಟೆವು ನಾವು। ಮುದದಲಿ ಶಿರಸಾಷ್ಟಾಂಗದಿ ನಮಿಸುತ। ಹೃದಯದಿ ನಿನ್ನಯ ಮೂರ್ತಿಯ ನಿರುಕಿಸಿ। ಮದನ ಜನಕ ನಿನ್ನ ಭಜಿಸುವೆ ನಿರುತವು। ಮನ್ನಿಸಿ ಸಲಹೈ ಶ್ರೀವಾಸುದೇವ। ಎಮ್ಮಯ ಪ್ರಾಣವ ಉಳಿಸೈ ದೇವ॥

(ಯಶೋಧೆಯು ಗಾಬರಿಯಿಂದ ಗೋಪಸ್ತ್ರೀಯರೊಡನೆ ಓಡಿ ಬರುವಳು. ಕೃಷ್ಣನು ಕಾಳಿಂಗನ ಹೆಡೆಯ ಮೇಲೆ ನಾಟ್ಯವಾಡುತ್ತಿರುವನು)

ಯಶೋಧೆ:- ಓ ಜಗದೋದ್ಧಾರ। ನೀಲಾಮಯನೆ ಪಾವನಗೊಳಿಸಿದೆ ಗೋಕುಲವನ್ನು। ಬಾಲಕೃಷ್ಣನೆ ಗೋಪಾಲಕೃಷ್ಣನೆ॥ ನಾ ಬೇಡುವೆ ನಿನ್ನ ದೀನತೆಯಿಂದ ಬಾಲಕೃಷ್ಣನೆ ಗೋಪಾಲಕೃಷ್ಣನೆ॥

ಕಾಳಿಯ ಹೆಡೆಯನು। ಕಾಲಲಿ ತುಳಿಯುತ। ಲೀಲೆಯ ತೋರುತ ನಿಂತಿರುವೆ। ಬಾಲಕರೂಪನೆ ನಿನ್ನಯ ಮಹಿಮೆಯ। ಅರಿಯದೆ ಲೋಕವು ತಪಿಸುತಿದೇ। ಈ ಜಗವನು ಕಾಯಲು ನೀನಾಧಾರ। ತೋರಿದೆ ನೀನು ಕೃಷ್ಣಾವತಾರ। ಬಾಲಕೃಷ್ಣನೆ ಗೋಪಾಲಕೃಷ್ಣನೆ॥

ಶರಣರ ಕಾಯುವ ಬಿರುದನು ಪೊತ್ತಿಹ। ಮುರುಳಿಯ ಲೋಲನೆ ಬಾ ಬೇಗ। ಕೇರಿಯ ಜನಗಳ ದೃಷ್ಟಿಯು ತಾಗಿದೆ। ದೃಷ್ಟಿಯ ನಿಳುಹುವೆ ಬಾ ಬೇಗ। ಈ ಯದುಕುಲ ಕೀರ್ತಿಗೆ ನೀನಾಧಾರ। ಆರತಿ ಪಾಡುವೆ ಬಾ ಕುವರ। ಬಾಲಕೃಷ್ಣನೆ ಗೋಪಾಲಕೃಷ್ಣನೆ। ನಾ ಬೇಡುವೆ ನಿನ್ನ ದೀನತೆಯಿಂದ। ಬಾಲಕೃಷ್ಣನೆ ಗೋಪಾಲಕೃಷ್ಣನೆ॥

(ಕೃಷ್ಣನು ಕಾಳಿಂಗನ ಹೆಡೆಯಿಂದ ಇಳಿಯುವನು, ಕಾಳಿಂಗನು ಹೊರಟು ಹೋಗುವನು ಕೃಷ್ಣನಿಗೆ ಯಶೋಧೆ ಗೋಪಸ್ತ್ರೀಯರೊಡನೆ ಆರತಿ ಪಾಡುವಳು।)

ಯಶೋಧೆ:- ನಂದಗೋಪಕುಮಾರ। ನಮೋ ನಮೋ। ಇಂದಿರೇಶ ಮುಕುಂದ ನಮೋ ನಮೋ। ಮಂದರೋದ್ಧಾರ ದೇವ ನಮೋ ನಮೋ। ಗೋವಿಂದಾ ಸೃಷ್ಟಿಕರ್ತನೆ ಕೃಷ್ಣಾ ನಮೋ ನಮೋ। ದುಷ್ಟಶಿಕ್ಷಕ ದೇವ ನಮೋ ನಮೋ॥ ಶಿಷ್ಟರಕ್ಷಕ ಸ್ವಾಮಿ ನಮೋನಮೋ॥

## ನೆಲವಿನ ಮೇಲಿನ ಹಾಲು ಮೊಸರು (ಶ್ರೀಕೃಷ್ಣಲೀಲೆ) ರಾಗ: ಬೇಹಾಗ್

ನೆಲುವಿನ ಮೇಲಿನ ಹಾಲು ಮೊಸರು ಬಲು ಬಾಯಾರಿ ಕುಡಿಯುತ್ತಿದ್ರೆ ನನ್ನ ಕೈ ಕಾಲು ನೀವು ಕಟ್ಟಬಹುದೆ? ನನ್ನ ಗಲ್ಲ ಹಿಡಿದು ನೀವು ಗಿಲ್ಲಬಹುದೆ? ನಿಮ್ಮ ಸೀರೆ ಕೊಡೆನೆ ಗೋಪಿ ಕುಬುಸ ಕೊಡೆನೆ॥1॥ ನಿನ್ನೆಯ ರಾತ್ರೀಲಿ ಬಿನ್ನಾಣದಿಂದ ಬಂದು ನಮ್ಮ ಹುಡುಗಿ ಸೀರೆ ಹಿಡಿದು ಎಳೆಯಬಹುದೆ ನಮ್ಮ ಹುಡುಗಿ ಜಡೆಯ ಹಿಡಿದು ಎಳೆಯಬಹುದೆ ನಮ್ಮ ಸೀರೆ ಕೊಡೊ ಕೃಷ್ಣ ಕುಬುಸ ಕೊಡೊ॥2॥ ಬೆಣ್ಣೆ ಮುದ್ದೆ ಕೊಡುತೇನೆಂದು ಬಿನ್ನಾಣದಿಂದ ಬಂದು ಸುಣ್ಣದ ಮುದ್ದೆ ಬಾಯ್ಗೆ ನೀವು ಇಡಬಹುದೆ ಗೋಪಿ ಸುಣ್ಣದ ಮುದ್ದೆ ಬಾಯ್ಗೆ ನೀವು ಇಡಬಹುದೇ ಗೋಪಿ ಮಣ್ಣು ತಿಂದ ಮಂಕನೆಂದು ಅನ್ನಬಹುದೆ? ನಿಮ್ಮ ಸೀರೆ ಕೊಡೆನೆ ಗೋಪಿ ಕುಬುಸ ಕೊಡೆನೆ॥3॥ ನಿನ್ನೆಯ ಸಂಜೇಲಿ ಮನೆಯೊಳಗೆ ದೂರಿ ನೀನು ಮೊಸರು ಮಡಕೆ ಒಡೆದು ನೀನು ಹೋಗಬಹುದೆ ಹಾಲನ್ನೆಲ್ಲ ಕುಡಿದು ನೀನು ಹೋಗಬಹುದೆ ನಮ್ಮ ಸೀರೆ ಕೊಡೊ ಕೃಷ್ಣ ಕುಬುಸ ಕೊಡೊ॥4॥ ನಿನ್ನೆಯ ಉದಯದಲ್ಲಿ ಕೃಷ್ಣಾ ಬಾರೆಂದು ಕರೆದು ನನ್ನ ಕೆನ್ನೆ ಹಿಡಿದು ನೀವು ಗಿಲ್ಲಬಹುದೆ? ಕಳ್ಳ ಕೃಷ್ಣ ನೆಂದು ನೀವು ಅನ್ನಬಹುದೆ? ನಿಮ್ಮ ಸೀರೆ ಕೊಡೆನೆ

ಗೋಪಿ ಕುಬುಸ ಕೊಡೆನೆ॥5॥ ನಿನ್ನೆಯ ರಾತ್ರಿಲಿ ಕಳ್ಳತನದಿಂದ ಬಂದು ನಮ್ಮ ಹುಡುಗಿ ಮೈಯ ನೀನು ಮುಟ್ಟಬಹುದೆ? ನಮ್ಮ ಹುಡುಗಿ ಮೈಯ ನೀನು ಗಿಲ್ಲಬಹುದೆ? ನಮ್ಮ ಸೀರೇ ಕೊಡೊ ಕೃಷ್ಣ ಕುಬುಸ ಕೊಡೊ॥6॥ ಓಡೋಡಿ ಹೋಗುತಿರಲು ಮೊಸರು ಕೊಡುತ್ತೇನೆಂದು ಕರವೆತ್ತಿ ತಲೆಯ ಮೇಲೆ ಹೊಡೆಯಬಹುದೆ? ಹೇಳಿ ಭಾರವನು ತಲೆಯ ಮೇಲೆ ಹೊರಿಸಬಹುದೆ? ನಿಮ್ಮ ಸೀರೆ ಕೊಡೆನೆ ಗೋಪಿ ಕುಬುಸ ಕೊಡೆನೆ॥7॥ ಸ್ತ್ರೀಯರೆಲ್ಲರು ಸೇರಿ ಪಾಕಾವ ಮಾಡುತ್ತಿರಲು ಮೊಣಕಾಲು ಹಿಡಿದು ನೀವು ನೂಕಬಹುದೆ? ಜುಟ್ಟು ಹಿಡಿದು ನೀವು ನನ್ನ ಕಟ್ಟಬಹುದೆ? ನಿಮ್ಮ ಸೀರೆ ಕೊಡೆನೆ ಗೋಪಿ ಕುಬುಸ ಕೊಡೆನೆ॥8॥ ಗೋಪಿಯರೆಲ್ಲ ಕೂಡಿ ಗೋಪಾ ಬಾರೆಂದು ಕರೆದು ಬಿಳಿಯ ಸೀರೆ ನನಗೆ ನೀವು ಉಡಿಸಬಹುದೆ? ನನ್ನ ಗಲ್ಲ ಹಿಡಿದು ನೀವು ಗಿಲ್ಲಬಹುದೆ? ನಿಮ್ಮ ಸೀರೆ ಕೊಡೆನೆ ಗೋಪಿ ಕುಬುಸ ಕೊಡೆನೆ॥9॥ ಇಲ್ಲಿ ಯಾರು ಇಲ್ಲವೆಂದು ಕೊಬ್ಬಿ ಮಾತಾಡುವೆ ನಿನ್ನ ಗರ್ವ ಇಳಿಸುತ್ತೇವೆ ಗೋಪಾಲನೆ ಗಂಡಸರಿಗೆ ಹೇಳುತ್ತೇವೆ ಶ್ರೀಕೃಷ್ಣನೆ...॥10॥ ಜಗದೊಡೆಯನಾದ ಎನಗೆ ಗರ್ವವನ್ನು ಇಳಿಸೋರ್‍ಯಾರು? ಎಲ್ಲ ಕಡೆಯು ನಾನೆ ಇರುವೆ ಭಾಮೆಯರೆ... ನಂಬಿದರೆ ಮೋಕ್ಷ ಕೊಡುವೆ ಗೋಪೀಯರೆ ಮಾತುಗಳಿಗೆ ಹೆದರೋನಲ್ಲ ಜಾಣೆಯರೆ ॥11॥ ಇನ್ನು ಸಾಕು ಜಾರತನ ಎಲ್ಲಾರು ನೋಡುವರು ಇನ್ನು ಮೇಲೆ ನಿನ್ನ ಸಂಗ ಮಾಡುವುದಿಲ್ಲವೊ... ಇನ್ನು ಮೇಲೆ ಮಾನವಾಗಿ ಇರುತ್ತೇವಯ್ಯ... ಮನದಲ್ಲಿ ನಿನ್ನ ಧ್ಯಾನ ಮಾಡುವೆವು...॥12॥ ಮಾನವನ್ನು ಬಿಟ್ಟು ನೀವು ಧ್ಯಾನವನ್ನು ಮಾಡಿದರೆ ಕೈಗಳೆತ್ತಿ ಬೇಡಿದರೆ ಭಾಮೆಯರೆ ನಿಮ್ಮ ಸೀರೆಯನ್ನು ಕೊಡುವೆ ನಾನು ಜಾಣೆಯರೆ ನಿಮಗೆ ಮೋಕ್ಷವನ್ನು ಕೊಡುವೆ ನಾನು ಗೋಪೀಯರೆ॥13॥ಜ್ಞಾನವನ್ನು ಕೊಡುವೊ ಕೃಷ್ಣ ದೀನರನ್ನು ಕಾಯೋ ಕೃಷ್ಣ ನಿನ್ನ ನಾಮ ಭಜನೆಯ ಮಾಡುವೆವು... ಒಂದು ಕೈ ವಂದನೆ ಮಾಡುವೆವು....॥14॥ ಒಂದು ಕೈ ವಂದನೆಗೆ ಒಪ್ಪುವುದಿಲ್ಲ ನಾನು ಬಂದು ನಿಂದು ಎರಡುಕೈಯ್ಯ ಮುಗಿಯಬೇಕು ಗೋಪಾಲ ಕೃಷ್ಣನೆಂದು ಹೊಗಳಬೇಕು ನಿಮ್ಮ ಸೀರೆ ಕೊಡುವೆ ನಾನು ಕುಬುಸ ಕೊಡುವೆ॥15॥ ಸಂಭಾಷಣೆ: ನನ್ನ ಮೇಲೆ ಒಂದು ಪದ್ಯವನ್ನು ಹಾಡಿರಿ. ಆಗ ನಿಮಗೆ ಸೀರೆಗಳನ್ನು ಕೊಡುತ್ತೇನೆ. ನಮಗೆ ನಮ್ಮ ಸೀರೆಗಳನ್ನು ಕೊಡೊ ಕೃಷ್ಣ ಜಗದೋದ್ಧಾರ, ಆಪತ್ ಬಾಂಧವ, ಅನಾಥ ರಕ್ಷಕ, ಶ್ರೀವೇಣುಗೋಪಾಲ ಕೃಷ್ಣ ನಿನ್ನನ್ನು ಹೊಗಳುವುದಕ್ಕೆ ಒಂದು ನಾಲಿಗೆ ಸಾಲದಯ್ಯ॥16॥

### ಗೋಪಿಕೆಯರ ಹಾಡು

ಆನಂದವೆ ಜಗದಾನಂದವೆ। ಶ್ರೀ ಕೃಷ್ಣ ಲೀಲೆಯು ಆನಂದವೆ। ಗೋಪಾಲ ವಿಠಲನೆ ಆನಂದವೆ। ಗೋವಿಂದ ವಿಠಲನೆ ಆನಂದವೆ। ಆನಂದವೆ ಬ್ರಹ್ಮಾನಂದವೆ। ಸೀರೆಗಳನ್ನು ಕೊಟ್ಟು -ಕೃಷ್ಣ ಹೊರಟ।

### ಯಶೋದ ಹಾಡು

ನೀಲ ವರ್ಣನು ಕೃಷ್ಣ ನೀಲ ಬಾಲನು ಕೃಷ್ಣ ಕಣ್ಣಿಗಿವನು ಕಾಣದಾದನೆ-ಗೋಪಮ್ಮ ಕೇಳೆ ಕಣ್ಣಿಗಿವನು ಕಾಣದಾದನೆ ಗೋಪಮ್ಮ ಕೇಳೆ ನಮ್ಮ ಮನೆಯ ಬೆಣ್ಣೆ ತಿಂದು। ನಮ್ಮ ಮನೆಯ ಹಾಲು ಕುಡಿದು। ಯಾರ ಮನೆಗೆ ಹೋಗಿ ಇರುವನೊ। ಯಾರ ಮನೆಗೆ ಹೋಗಿ ಇರುವನೊ। ಕಣ್ಣಿಗೆ ಕಪ್ಪನ್ಹಚ್ಚಿ ಕಾಲಿಗೆ ಗೆಜ್ಜೆಕಟ್ಟಿ ಮುಂಗುರುಳು ಬಾಚಿಇದ್ದನೆ ಗೋಪಮ್ಮ ಕೇಳೆ ಮುಂಗುರುಳು ಬಾಚಿ ಇದ್ದನೆ ಗೋಪಮ್ಮ ಕೇಳೆ॥2॥ ಸಂಭಾಷಣೆ: ನಮ್ಮ ಕೃಷ್ಣನನ್ನು ನೋಡಿದಿರಾ ಗೋಪಿ? ನಾವು ನೋಡಿದೆವಮ್ಮ ನಾವು ಸ್ನಾನ ಮಾಡುತ್ತಿರುವಾಗ ನಮ್ಮ ಸೀರೆಗಳನ್ನು ತೆಗೆದುಕೊಂಡು ಮರದ ಮೇಲೆ ಕೂತಿದ್ದ ನಾವು ಬೇಡಿಕೊಂಡ ಮೇಲೆ ನಮ್ಮ ಸೀರೆಗಳನ್ನು ಇದೀಗ ಇತ್ತು ಹೋದನಮ್ಮ ಕೃಷ್ಣಾ ಕೃಷ್ಣಾ......

### ಜಯಮಂಗಳವಾಗಲಿ ಈ ಲೋಕಕ್ಕೆಲಾ

ಜಯಮಂಗಳವಾಗಲಿ ಈ ಲೋಕಕ್ಕೆಲ್ಲಾ ಶುಭಮಂಗಳವಾಗಲಿ ಈ ಲೋಕಕ್ಕೆಲ್ಲಾ। ಕಾಲ ಕಾಲಕ್ಕೆ ವರ್ಷವಾಗಲಿ। ಪೈರು ಭೂಮಿಗಳಿಂದ ಬೆಳೆಯಲಿ। ಧನವಿಹೀನರು ಧನಿಕರಾಗಲಿ।ಮುದದಿ ಶತ ವರುಷಗಳು ಬಾಳಲಿ॥1॥ ಪುತ್ರರಾಗಲಿ

ಪೌತ್ರರಾಗಲಿ। ಶತ್ರು ಋಣ ರಾಗಗಳು ನೀಗಲಿ। ಮತಿವಿಹೀನರು ಮತಿವಂತರಾಗಲಿ। ಹಿತದಿ ಶತವರುಷಗಳು ಬಾಳಲಿ।।2।।

## ರಂಗಗೀತೆ

### ಕರಿಹೈದನೆಂಬೋದು

ಕರಿಹೈದನೆಂಬೋದು ಮಾದೇಶ್ವರ। ಮಾದೇಶ್ವರಗೆ ಶರಣು ಮಾದೇಶ್ವರ।।ಪ।। ಕರಿಹೈದನವ್ವನ ಹೆಸರೆಂದು ನಿಲ್ಲಲಿ। ಅವನ ಬಳಿ ಎಂದೆಂದು ಒಳ್ಳಿತನು ಮೆಲ್ಲಲಿ। ಅವನ ಹೆತ್ತಾಕಾಡು ಎಂದೆಂದು ಚಿಗುರಲಿ।।2 ಸಾರಿ।। ಮಾದೇಶ್ವರ ಅವನ ಬಳಿ ಎಂದೆಂದು ಮಿಕ್ಕಿರಲಿ ಹೊಗಳಲಿ। ಅವನ ಹಾಡಿಗಳಿರಲಿ ಎಂದೆಂದು ಸೊಗದಲಿ। ಅವನ ಬಳಿ ಎಂದೆಂದು ನಗೆಯಿರಲಿ ಮೊಗದಲಿ।।2 ಸಾರಿ।। ಮಾದೇಶ್ವರ ಅವನ ಹೊಗಳುವ ಹಾಡು ಎಂದೆಂದು ಹಾಡಲಿ। ಅವನ ಬಳಿ ಎಂದೆಂದು ಹಬ್ಬವನು ಮಾಡಲಿ। ಕರಿಹೈದನಪ್ಪಾಜಿ।।2ಸಾರಿ।। ಮಾದೇಶ್ವರ।।

### ಚಿನ್ನ ಕೇಳ್ ಬ್ಯಾಡ್ವೆ

ಚಿನ್ನ ಕೇಳ್ ಬ್ಯಾಡ್ವೆ ನನ್ನ ಪುರಾಣ। ಈ ಸೀಮೆಗೆಲ್ಲಾ ಒಬ್ಬನೆ ನಾ ಜಾಣ। ಬಿಲ್ಲಿನಿಂದ ಬಿಟ್ಟಹಾಗೆ ಶ್ರೀಬಾಣ ನೀ ಬೀಡಬೇಡ ಓರೆನೋಟ ನಿನ್ನ ಬಿನ್ನಾಣ।। ಕೈಕೆಸರಾಗದೆ ಮಾಡುವೆ। ಮೈಬೆವರದೆ ದುಡಿಯುವೆ ನನಗಾಗಿ ಕೂಡ್ಸವ್ನೆ ಹಣಗಾರ ರಾಶಿ ಬಂಗಾರ ಗುಡ್ಡೇನೆ ಅಂತ ಕಾದವ್ನೆ ಪೂರ ಸದ್ಯ।।2 ಸಾರಿ।। ಅವನ ಬುರುಡೆಗೆ ಕಾಸುವೆ ಬಿಸಿನೀರ ।।1।। ಕೋಟಿ ಮ್ಯಾಲೆ ನಿನ್ನ ಬಚ್ಚಿಟ್ಟು ಕಣ್ಮುಚ್ಚಿದನೊಬ್ಬನು ಹುಲಿಯಣ್ಣ ಮೂಟೆ ನೂಲೇಣಿ। ಬಲವಾಗಿ ಕಟ್ಟಿ ಕಾದಿದ್ದ ಇನ್ನೊಬ್ಬ ಕಿರುಗಣ್ಣ ಇಬ್ಬರಿಗೂ ಕೈಕೊಟ್ಟ ಮತ್ತೊಬ್ಬ ಅಣ್ಣ ।।2 ಸಾರಿ।। ಆ ಭೂಪತಿ ನಾನೆ ನರಿಯಣ್ಣ।।2।। ಹತ್ತು ಜೀವಿಗಳ ಕುತ್ತಿಗೆ ಕೈಇಟ್ಟು ಹೊತ್ತುಕೊಳ್ಳುವನು ನರಮಾನವ ನೂರು ಮಂದಿಯ ಹೊಟ್ಟೆ ಮ್ಯಾಲೆ ಹೊಡೆದು ಹಣಗಾರ ಹೇರುವ ಬಂಗಾರವ ಹಣಗಾರರ ಸುಲಿಗೆ ಮಾಡ್ಯಾನು ಅರಸ ಈ ।।2 ಸಾರಿ।। ಈ ಸುಲಿಗೆಯ ಚುಕುತಿಗೆ ಗುರು ನಾನೇ।।

### ನಾಗವೇಣಿನಗರಿಗೇ (ಶಕುಂತಲೆ ನಾಟಕ)

ದುಷ್ಯಂತ: ನಾಗವೇಣಿನಗರಿಗೇ ನಾ ಪೋಗಿ ಬರುವೆನೇ।।

ಶಕುಂತಳೆ: ಇಂತು ಪೇಳಿ ಹೋಗಿ ಸೇರೆ ಅಂತಃಪುರವನು ಅಂತರಂಗವೆಂತು ಹೇಳೋ ಕಾಂತಕಾಣೆನೋ।।

ತಡೆಯಲಾರೆ ನಿನ್ನನು ನಾ ಬಿಡಲುಲಾರೆನೋ। ಪೊಡವಿಗೊಡೆಯ ಪೋಪರೇ ಸಂಗಡಲೆ ಬರುವೆನೋ।।

ದುಷ್ಯಂತ: ಅರಸುತನದ ಕಾರ್ಯವೆನ್ನು ತ್ವರಿತಗೊಳಿಪುದೇ। ಕರಸಿಕೊಂಬೆ ಬೇಗ ನಿನ್ನ ಸರಸಿಜಾನನೇ।।

### ಬಾರೆ2 ನನ್ನ ಹಿಂದೆ

ಬಾರೆ ಬಾರೆ ನನ್ನ ಹಿಂದೆ ಹಿಂದೆ। ಹೆಣ್ಣೆ ನೀ ಮೆಟ್ಟಿ ಬಂದ ಪುರುಷರೆಲ್ಲ ಒಂದೇ ಒಂದೇ। ಬ್ಯಾರೆ ದಾರಿ ನಿಂಗೆ ತೋರ್ತೀನಿ। ಮುಂದೆ ನೀ ಬೆಚ್ಚಿ ಬಿದ್ದು ನೋಡಬೇಡ ಹಿಂದೆ ಮುಂದೆ।।1।। ಗಸ್ತು ತಿಂದ ಗಂಡನೋ ಸುಸ್ತು ಹೊಡೆದ ಭಂಡನೋ। ಸಿಟ್ಟಿನಿಂದ ಕೈಹಿಡಿದ ಪುಂಡನೋ ಪ್ರಚಂಡನೋ ಕುಂತಲ್ಲೆ ಕಾಯಿಸದೆ ಬಂದೋನೆ ಮನ್ಮಥ।।2।। ಬಿಂಕನಾಗಿ ಕರೆತಂದೆ ಮಂಕುಬೂದಿ ಹಾಕ್ಬಂದೆ ಶಂಖವಾದ್ಯ ಮಾಡ್ತಾಳಲ್ಲೋ ಹರಹರ ಕಿಂಕರರ ಕಾಪಾಡೋ ಶಂಕರ।।3।। ಸರಸರ ಸರ ಮುಂದೆಸರಿ ಕಿರಿಕಿರಿಕಿರಿ ಕಿನ್ನರಿ ಇಡುಮುಡಿ ಜಾಣಮರಿ ಠಾಕುಟೀಕು ಠೀಕುಟಿಂಗರಿ ನಗುತ್ತ ಅಳುತ್ತ ಬಡಬಡನೆ ಹಾಂಗುಹೀಂಗೂ ಇಡುಅಡಿ ಇಡುಅಡಿ ಬಿಡುಗಾಡಿ ನಡಿನಡಿ।।4।। ಒಂಟಿಯಾಗಿ ಕಾದಿದ್ದೆ ಜಂಟಿಯಾಗಿ ನೀಬಂದೆ ತಂಟೆಗಿಂಟೆ ಮಾಡ್‌ಬ್ಯಾಡವೆ ಝುಂರ್ಝುಟಿ ತುಂಟತನ ತೋರ್‌ಬ್ಯಾಡ್ವೆ ಬಿತ್ತರಿ ಕುಡಿಕುಡಿನೋಟ ಹುಡುಕಾಟ ಉಲ್ಟಾಪಲ್ಟಾ ತಕದಿಮಿತಾ।।5।।

### ಯವ್ವ ಬ್ಯಾಟಿ ಬ್ಯಾಟಿಯನಾಡಿದ

ಯವ್ವ ಬ್ಯಾಟಿ ಬ್ಯಾಟಿಯನಾಡಿದ ಬ್ಯಾಡರ ಹುಡುಗ ಕಾಡ ಬ್ಯಾಟಿಯನಾಡಿದ॥ಪ॥ ಕಾಡಿನ ಮೈಸವರಿ ಸೂಸ್ಯಾವೆ ಬಿಸಿಗಾಳಿ ತುಳಕ್ಯಾವ ಖುಷಿ ಪುರಮಾಸಿ ಹಾಯವ್ವ। ಹವ್ವಾಲೆ ಅಂದರ ಅವನೊಡ ಹೂ ಚಿಗುರಗಂಧ ಸೂಸ್ಯಾವ ಮಲ್ಲಿ ಹಾಯವ್ವ। ಬಾಯಿ ಬಂದಾವ ಸಂದಿಗೊಂದಿಗಿ ಹಾತಾಯಿ॥1॥ ಮಾತನಾಡುತ ಬಂದ ಮೈಮ್ಯಾಲ ಕೈತಂದ ಬಸವಳಿದವ ಹಸಿ ದಿಗರಹಾಯವು ಜೋಲಿ ತಪ್ಪಿದ ಪೋರಿ ಬಿದ್ದಾಳ ತೆಕ್ಕೀಗಿ ಹರಿದಾವು ನಾಚಿಕಿ ಹಾಯವ್ವ। ಸಂದ ಉಳಿಯದ ಹಾಂಗಾ ಒಂದಾಗಿ ಮೈಮರೆತ ಇರಲಿದೋ ಕಡೇತನಕ ಈ ನೆನಪ॥2॥

## ಗಮಕ

### ಕೆಲವಂ ಬಲ್ಲವರಿಂದ ಕಲ್ತು (ಸೋಮೇಶ್ವರ ಶತಕ–ಮತ್ತೇಭವಿಕ್ರೀಡಿತ ವೃತ್ತ)

ಕೆಲವಂ ಬಲ್ಲವರಿಂದ ಕಲ್ತು। ಕೆಲವಂ ಶಾಸ್ತ್ರಂಗಳಂ ಕೇಳುತಾಂ ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂದ ನೋಡುತಂ। ಕೆಲವಂ ಸಜ್ಜನ ಸಂಗದಿಂದಮರಿಯಲ್ ಸರ್ವಜ್ಞನಪ್ಪಂ ತೆತಾಂ ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚನ್ನಸೋಮೇಶ್ವರಾ॥

ಅವಿನೀತಂ ಮಗನೇ? ಅಶೌಚ ಮುನಿಯೇ? ಬೈವಾಕೆ ತಾಂಪತ್ನಿಯೇ? ಸವಿಗೆಟ್ಟನ್ನವದೂಟವೇ? ಕುಜನರೊಳ್ಕೂಡಿರ್ಪವಂ ಮಾನ್ಯನೇ? ಬವರಕ್ಕಾಗದ ಬಂಟನೇ? ಎಡರಿಗಂತಾನಾಗದಂ ನೆಂಟನೇ? ಶಿವನಂ ಬಿಟ್ಟವ ಶಿಷ್ಯನೇ? ಹರಹರಾ ಶ್ರೀ ಚನ್ನಸೋಮೇಶ್ವರಾ॥

ಚರಿಪಾರಣ್ಯದ ಪಕ್ಷಿಗೊಂದು ತರುಗೊಡ್ಡಾಗಳ್ ಫಲಂ ತೀವಿದಾ ಮರಗಳ್ಪುಟ್ಟವೆ? ಪುಷ್ಪಮೊಂದು ಬಳಲಲ್ ಭೃಂಗಕೆ ಪೂವಿಲ್ಲವೇ? ನಿರುತಂ ಸತ್ಕವಿಗೋರ್ವಗರ್ವಿ ಪುಸಿದೋರ್ವಂ ಲೋಭಿಯಾಗಿರ್ದೊಡೇಂ? ಧರೆಯೊಳ್ ದಾತರು ಪುಟ್ಟರೇ? ಹರಹರಾ ಶ್ರೀಚನ್ನ ಸೋಮೇಶ್ವರಾ॥

ಉಡುರಾಜಂ ಕಳೆಗುಂದಿ ಪೆರ್ಚದಿಹನೇ? ನ್ಯಗ್ರೋಧ ಬೀಜಂ ಕೆಲಂ ಸಿಡಿದುಂ ಪೆರ್ಮರನಾಗದೇ? ಎಳೆಗರುಂ ಎತ್ತಾಗದೇ? ಲೋಕದೊಳ್ ಮಿಡಿ ಪಣ್ಣಾಗದೇ? ದೈವದೊಲ್ಮೆಯಿರೆತಾಂ ಕಾಲಾನುಕಾಲಕ್ಕೆ ಕೇಳ್ ಬಡವಂ ಬಲ್ಲಿದನಾಗನೇ? ಹರಹರಾ ಶ್ರೀಚನ್ನ ಸೋಮೇಶ್ವರಾ॥

### ಗಜವದನ ಹೇರಂಬ ಗಣಪತಿ (ಕನಕದಾಸರ ಶಿವಭಕ್ತಿಸಾರ – ಭಾಮಿನೀಷಟ್ಪದಿ)

ಗಜವದನ ಹೇರಂಬ ಗಣಪತಿ। ಭುಜಗ ಭೂಷಣ ವಿಘ್ನಮದಸಾ। ಮಜಕೆ ಪಂಚಾನನ ಮಹೇಶ್ವರ ಪುತ್ರ ಶುಭಗಾತ್ರ। ಸುಜನ ಪಾಲಕವರವಿನಾಯಕ। ಭಜಿಸಿ ಪೂಜಿಸಿ ನಮಿಸಿ ನುತಿಸುವೆ। ನಿಜಮತಿಯನೊಲಿದಿತ್ತು ರಕ್ಷಿಸು ನಮ್ಮ ನನವರತ॥

ನೋಡುವುದು ಸಾಲೋಕ್ಯ ಪೂಜೆಯ। ಮಾಡುವುದು ಸಾಮೀಪ್ಯ ಧ್ಯಾನವ। ಮಾಡಿ ಹೃತ್ಕಮಲದಲಿ ನಿಲಿಪ ಸಮಾಧಿ ಸಾರೂಪ್ಯ। ಕೂಡಿ ಭಕ್ತರೊಳಾಡಿ ನುತಿಗಳ। ಮಾಡುವುದೇ ಸಾಯುಜ್ಯ ನಿಮ್ಮನು। ಬೇಡಿಕೊಂಬೆನು ಶಿವನೆ ರಕ್ಷಿಸು ನಮ್ಮ ನನವರತ॥

ಶರಧಿ ಮಥನದೊಳುದಿಸಿ ವಿಷವಾ। ವರಿಸುತ್ತೈತರೆ ಕಂಡು ದೇವಾ। ಸುರರು ಮುನಿಗಳು ಬಂದು ನಿಮ್ಮಡಿಗೆರಗಿ ಮರೆಹೊಗಲು। ಪರಮಕರುಣಾಸಿಂಧು ಭಕ್ತರ। ಪೊರೆದು ಗರಳವ ಕರೆದು ಕಂಠದಿ। ಧರಿಸಿದೈ ಪರಮಾತ್ಮ ರಕ್ಷಿಸು ನಮ್ಮ ನನವರತ॥

ಅಷ್ಟ ಮೂರ್ತಿಯೆ ಜಯ ನಮಃಶ್ಶಿವ। ಪುಷ್ಟಿವರ್ಧನ ಜಯ ನಮಃಶ್ಶಿವ। ಇಷ್ಟಬಂಧುವೆ ಜಯ ನಮಃಶ್ಶಿವ। ಜಯ ಮಹಾದೇವ। ಸೃಷ್ಟಿಪಾಲಕ ಜಯ ನಮಃಶ್ಶಿವ। ವೃಷ್ಟಿವರ್ಧನ ಜಯ ನಮಃಶ್ಶಿವ। ಕಷ್ಟಗಳ ಪರಿಹರಿಸಿ ರಕ್ಷಿಸು ನಮ್ಮ ನನವರತ॥

ಹರನ ಪೂಜಿಪ ಕರವೆಕರ ಪುರ। ಹರನ ನುತಿಸುವ ಜಿಹ್ವೆ ಜಿಹ್ವೆಯು। ಗಿರಿಜೆಯರಸನ ನೆನೆವ ಬುದ್ಧಿಯೆ ಬುದ್ಧಿ ಶಂಕರನ। ಚರಣಕೆರಗುವ ಶಿರವೆ ಶಿರ ಶಶಿ। ಧರನ ಧ್ಯಾನಿಪ ಮನವೆ ಮನವೆಂ। ದರಿವ ಭಕ್ತಿಯನಿತ್ತು ರಕ್ಷಿಸು ನಮ್ಮ ನನವರತ।। ಕುಕ್ಷಿಯೊಳು ಬ್ರಹ್ಮಾಂಡ ತಂಡವ। ರಕ್ಷಿಸುವ ಪರಮಾತ್ಮ ನೀಂ ವಟ। ವೃಕ್ಷದಡಿಯಲಿ ಬಲಿದ ಪದ್ಮಾಸನದ ಚಿನ್ಮುದ್ರೆ। ಅಕ್ಷಮಾಲೆಯ ಧರಿಸಿ ಕರದಿಮು। ಮುಕ್ಷುಗಳ ಮಧ್ಯದಲಿ ಕುಳಿತಿಹ। ದಕ್ಷಿಣಾಮೂರ್ತಿಯೆ ರಕ್ಷಿಸು ನಮ್ಮ ನನವರತ।। ಆರನಾಮವನೊಲಿದು ಪಾಡುವೆ। ನಾರಪಾದವ ಪೂಜೆಮಾಡುವೆ। ನಾರಮೂರ್ತಿಯ ನೆನೆವೆ ಮನದೊಳು ನೀನರಿಯದಂತೆ। ಆರು ಗತಿ ಮತಿಯಾರು ದಿಕ್ಕಿನ। ಗಾರು ನೀನಲ್ಲದೆ ಸದಾಶಿವ। ಮಾರಹರಮೆಯ್ದೋರಿ ರಕ್ಷಿಸು ನಮ್ಮನನವರತ।।

ಧರೆಯೊಳಧಿಕವೆನಿಪ್ಪ ನರ್ತನ ಪುರದೊಡೆಯ ಸೋಮೇಶ್ವಲಿಂಗನ। ಸಿರಿಪದದ್ವಯ ಸೇವಕರ ಸೇವಾನುಸೇವಕನು। ಒರೆದೆ ಬಾಲನ ತೊದಲುನುಡಿಗಳ। ಹರುಷಪುಳಕದಿ ಜನನಿ ಕೇಳುವ। ತೆರದಿ ಲಾಲಿಸಿ ಶಿವನೆ ರಕ್ಷಿಸು ನಮ್ಮ ನನವರತ।।

## ತೊಳೆದು ಜನನಿಯ ಜಠರಮಂ (ಜೈಮಿನಿ ಭಾರತ - ರಾಮಾಯಣ-ವಾರ್ಧಕ ಷಟ್ಪದಿ)

ತೊಳೆದು ಜನನಿಯ ಜಠರಮಂ ಜನಿಸಿ ಭವನದೊಳ್। ಬಳೆದು ಲಕ್ಷ್ಮಣ ಭರತ ಶತ್ರುಘ್ನರೊಳ ಗೂಡಿ। ತಳೆದು ಕೌಶಿಕನ ಮಖಮಂ ಕಾದು ತಾಟಕಿಯನೊರಸಿ ಮುನಿಸತಿಯಘವನು।। ಕಳೆದು ಮಿಥಿಲೆಗೆ ಪೋಗಿ ಭಾರ್ಗವನ ಗರ್ವಮಂ। ಸೆಳೆದು ಹರಚಾಪಮಂ ಮುರಿದೊಲಿಸಿ ಸೀತೆಯಂ। ತಳೆದುತ್ಸವದೊಳಯೋಧ್ಯಾಪುರಿಗೆ ದಶರಥನೊಡನೆ ರಾಘವಂ ಬಂದನು।।2।। ವರ್ಧಿಪ ಕುಮಾರಂಗೆ ಭೂಮೀಶ್ವರಂ ಬಳಿಕ। ಮೂರ್ಧಾಭಿಷೇಚನಂ ಮಾಡಲನುಗೈಯೆ ನೃಪ। ನರ್ಧಾಂಗಿ ತಡೆಯೆ ಪೊರಮಟ್ಟು ಬನಕೈದೆ ನರಪತಿ ಪುತ್ರಶೋಕದಿಂದೆ।। ಸ್ವರ್ಧಾಮಕಡರೆ ಕೇಳುತೆ ಭರತನಂ ಕಳುಹಿ। ದುರ್ಧರದರಣ್ಯಪ್ರವೇಶಮಂ ಮಾಡಿದಂ। ಸ್ಪರ್ಧಿಸುವ ದನುಜರಂ ಮುರಿದು ಮುನಿಗಳನೋವಿ ಸತಿಸಹಿತ ಕಾಕುತ್ಸ್ಥನು।।3।। ದಂಡಕಾರಣ್ಯದೊಳಿರಲ್ಕೆ ಶೂರ್ಪಣಖೆ ಬಂ। ದಂಡಲೆಯಲಾಕೆಯಂ ಭಂಗಿಸಿ ಖರಾದ್ಯರಂ। ಖಂಡಿಸಿ ಕನಕಮೃಗ ವ್ಯಾಜ್ಯದಿಂದೈದೆ ಲಕ್ಷ್ಮಣನಗಲೆ ಕಪಟದಿಂದೆ।। ಕೊಂಡೊಯ್ಯೆ ರಾವಣಂ ಸೀತೆಯಂ ಕಾಣದುರೆ। ಬೆಂಡಾಗಿ ವಿರಹದಿಂ ಬಿದ್ದಿಹ ಜಟಾಯುವಂ। ಕಂಡು ಪೊಲಬಂ ಕೇಳ್ದು ಸೌಮಿತ್ರಿ ಸಹಿತ ನಡೆದಂ ಮುಂದೆ ರಘುನಾಥನು।।4।। ಪಥದೊಳ್ ಕಬಂಧನಂ ಕೊಂದು ಶಬರಿಯ ಮನೋ। ರಥಮಂ ಸಲಿಸಿ ಕರುಣದಿಂ ದಾಂಜನೇಯನಂ। ಪ್ರಥಮದೊಳ್ ಕಂಡು ಸುಗ್ರೀವಂಗೆ ಕೈಗೊಟ್ಟು ವಾಲಿಯಂ ಬಾಣದಿಂದೆ।। ಮಥಿಸಿ ರಾವಣನ ಮೇಲಣ ರಾಜಕಾರಿಯದ। ಕಥನಕಾಳೋಚಿಸಿ ಕರಡಿಕಪಿ ಗಳಂ ನೆರಪಿ। ಪೃಥಿವಿಜೆಯನರಸಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್ಸ್ಥನು।।5।। ಧೀಂಕಿಟ್ಟು ಶರಧಿಯಂ ದಾಂಟಿ ಮೇದಿನಿಯ ಸುತೆ। ಗಂಕಿತದ ಮುದ್ರಿಕೆಯನಿತ್ತು ಬೀಳ್ಕೊಂಡು ನಿ। ಶ್ಶಂಕೆಯೊಳಶೋಕವನಮಂ ಕಿತ್ತು ದನುಜರಂ ಸದೆದಕ್ಷನಂ ಮರ್ದಿಸಿ।। ಅಂಕದೊಳ್ ಬಳಿಕಿಂದ್ರ ಜಿತುವಿನ ಬ್ರಹ್ಮಾಸ್ತ್ರ। ದಂಕೆಯೊಳ್ ನಿಂದು ವಾಲಧಿಗಿಕ್ಕಿದುರಿಯಿಂದೆ। ಲಂಕೆಯಂ ಸುಟ್ಟು ಬಂದೊಸಗೆವೇಳ್ದ ನಿಲಜನನಸುರಾರಿ ಮನ್ನಿಸಿದನು।।6।। ಗಣನೆಯಿಲ್ಲದ ಕಪಿಗಳಂ ಕೂಡಿಕೊಂಡು ತೆಂ। ಕಣಕಡಲ ತೀರದೊಳ್ ಬಿಟ್ಟು ಬಂದೊಡೆ ವಿಭೀ। ಷಣನಂ ಪರಿಗ್ರಹಿಸಿ ಲಂಕಾಧಿಪತ್ಯಮಂ ಕೊಟ್ಟು ಜಲಧಿಯನೆ ಕಟ್ಟಿ।। ರಣದೊಳಸುರರ ಕುಲದ ಹೆಸರುಳಿಯದಂತೆ ರಾ।ವಣ ಕುಂಭಕರ್ಣ ಮೊದಲಾದ ರಕ್ಕಸರನುರೆ। ಹಣೆದವಾಡಿದನುರವಣಿಸಿ ಧೂಳಿ ಗೋಟೆಯಂ ಕೊಂಡನಾ ರಘುವೀರನು।।7।। ರಾವಣನ ಪದಮಂ ವಿಭೀಷಣಂ ಗೊಲಿದಿತ್ತು। ದೇವರ್ಕಳಂ ಪೊರೆದು ಸೆರೆಯಿರ್ದ ಸೀತೆಯಂ। ಪಾವಕನ ಮುಖದಿಂ ಪರಿಗ್ರಹಿಸಿ ಮೂಜಗಂ ಮೆಚ್ಚಿ ವಿಜಯೋತ್ಸವದೊಳು।। ಭೂವರಂ ಸೌಮಿತ್ರಿ ದಶ ಮುಖಾವರಜ ಸು। ಗ್ರೀವಾದಿಗಳ ಗಡಣದಿಂದಯೋಧ್ಯಾಪುರಿಗೆ। ದೂವಾಳಿಸಿದನಮಲ ಮಣಿಪುಷ್ಪಕದ ಮೇಲೆ ಭರತನಂ ಪಾಲಿಸಲ್ಕೆ।।8।। ವರಪುಷ್ಪಕವನಿಳಿದು ಭರತಶತ್ರುಘ್ನರಂ। ಕರುಣದಿಂ ತೆಗೆದಪ್ಪಿ ಕೌಶಿಕವಸಿಷ್ಠಾದಿ। ಗುರುಗಳಂ ಸತ್ಕರಿಸಿ

ಕೈಕೆಮೊದಲಾಗಿರ್ದ ಮಾತೃಜನಕ್ಕೈದೆ ನಮಿಸಿ।। ಅರಮನೆಯ ಸತಿಯರಂ ಸಚಿವರಂ ಪ್ರಜೆಗಳಂ। ಪರಿಜನಪ್ರಕೃತಿಗಳನಿರದೆ ಕಾಣಿಸಿಕೊಂಡು। ಬರವನೇ ಹಾರೈಸಿ ಕೃಶೆಯಾದ ಕೌಸಲೆಗೆ ರಾಮನಭಿವಂದಿಸಿದನು।।9।। ಕಯ್ದಳದೊಳೊಯ್ಯನೊಯ್ಯನೆ ಘನಸ್ನೇಹದಿಂ। ಮೆಯ್ದಡವಿ ತನಯನಂ ತಕ್ಕೈಸಿ ಮುಂಡಾಡಿ। ಕಯ್ದುಗಳ ಗಾಯಮಂ ಕಂಡು ಕರಗುತೆ ಮಗನೆ ನಿನ್ನ ಕೋಮಲತನುವನು।। ಪೊಯ್ದವರದಾರಕಟ ಬೆಂದುದೆನ್ನೊಡಲೆಂದು। ಸುಯ್ದು ಮುಗ್ಧಾ ಭಾವದಿಂ ತನ್ನ ಸವತಿಯಂ। ಬಯ್ದು ಮರುಗುವ ಮಾತೆಯಂ ನೋಡಿ ನಗುತೆ ಸಂತೈಸಿದಂ ರಾವಣಾರಿ।।10।। ಮೇಲೆ ತಾಳ್ದಂ ಶುಭಮುಹೂರ್ತದೊಳ್ ವಾರಿನಿಧಿ। ವೇಲೆಯಾದವನಿಯಂ ಪಟ್ಟಾಭಿಷೇಚನದ। ಕಾಲದೊಳ್ ಕಂಡರು ಸಮಸ್ತಮುನಿ ಗೀರ್ವಾಣ ವಾನರ ದನುಜ ಮನುಜರು।। ಮೂಲೋಕಮೈದೆ ಕೊಂಡಾಡೆ ಬಳಿಕುರ್ಜಿಯಂ। ಪಾಲಿಸು ತಿರ್ದನೊಂಬತ್ತು ಸಾಸಿರವರ್ಷ।ಮೋಲೈಸಿದುದು ರಾಘವೇಂದ್ರನಂ ನಿಖಿಳ ಭೂಪತಿಚಯಂ ಪ್ರಿತಿಯಿಂದೆ।।11।। ಯೂಪಮಯವಾಯ್ತು ಧರೆಯೆಲ್ಲಮುಂ ವರಜಾತ। ರೂಪಮಯವಾಯ್ತು ಮನೆಯೆಲ್ಲಮುಂ ಶುಕಪಿಕಾ।ಲಾಪಮಯ ವಾಯ್ತು ವನಮೆಲ್ಲಮುಂ ವರ್ಧಿಪ ಪ್ರಜೆಗಳಿಂ ಸಂಚರಿಸುವ।। ಗೋಪಮಯವಾಯ್ತು ಗಿರಿಯೆಲ್ಲಮುಂ ರತ್ನಪ್ರ।ದೀಪ ಮಯವಾಯ್ತು ತಮಮೆಲ್ಲಮುಂ ರಘುಜಪ್ರ। ತಾಪಮಯ ವಾಯ್ತು ಮೂಜಗಮೆಲ್ಲಮಂ ದಾಶರಥಿ ರಾಜ್ಯಮಂ ಪಾಲಿಸೆ।।12।।

## ಭಕ್ತಿಸಾರದ ಚರಿತೆಯನು ಹರಿ (ಕನಕದಾಸರ ಹರಿಭಕ್ತಿಸಾರ – ಭಾಮಿನಿ ಷಟ್ಪದಿ)

ಭಕ್ತಿಸಾರದ ಚರಿತೆಯನು ಹರಿ। ಭಕ್ತರಾಲಿಸುವಂತೆ ರಚಿಸುವೆ। ಮುಕ್ತಿಯಲಿ ಬರೆದೋದಿ ದವರಿಷ್ಟಾರ್ಥ ಸಿದ್ಧಿಪುದು। ಮುಕ್ತಿಗಿದು ನೆಲೆದೋರುವುದು ಹರಿ। ಭಕ್ತರೊಲಿದಾಲಿಪುದು ನಿಜಮತಿ। ಭಕ್ತಗೊಲಿವಂದದಲಿ ರಕ್ಷಿಸು ನಮ್ಮನನವರತ।। ಗಿಳಿಯಮರಿಯನು ತಂದು ಪಂಜರ ದೊಳಗೆ ಪೋಷಿಸಿ ಕಲಿಸಿ ಮೃದುನುಡಿ ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ। ತಿಳುಹಿ ಮತಿಯನು ಎನ್ನ ಜಿಹ್ವೆಗೆ। ಮೊಳಗುವಂದದಿನಿನ್ನ ನಾಮಾ ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ।। ದೀನನಾನು ಸಮಸ್ತ ಲೋಕಕೆ। ದಾನಿ ನೀನು ವಿಚಾರಿಸಲು ಮತಿ ಹೀನನಾನು ಮಹಾಮಹಿಮ ಕೈವಲ್ಯ ಪತಿನೀನು। ಏನು ಬಲ್ಲೆನು ನಾನು ನೆರೆಸು। ಜ್ಞಾನಮೂರುತಿ ನೀನು ನಿನ್ನ ಸಮಾನರುಂಟೇ ದೇವ ರಕ್ಷಿಸು ನಮ್ಮನನವರತ।। ಮರೆದೆ ನಭ್ಯುದಯದಲಿ ನಿಮ್ಮನು। ಮರೆಯೆನಾಪತ್ತಿನಲಿ ಪೊರೆಯೆಂ। ದೊರೆಯುವೆನು ಮನವೇಕೆ ಭಾವದೊಳಿಲ್ಲ ನಿಮ್ಮಡಿಯೇ। ಮರೆದು ಬಾಹಿರನಾದವನ ನೀ। ಮರೆವರೇ ಹಸು ತನ್ನ ಕರುವನು। ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ।।

ಗತಿವಿಹೀನರಿಗಾರು ನೀನೇ। ಗತಿಕಣಾ ಪತಿಕರಿಸಿಕೊಡು ಸ।ದ್ಗತಿಯ ನೀನೆಲೆದೇವ ನಿನಗಪರಾಧಿ ನಾನಲ್ಲ। ಶ್ರುತಿವಚನ ಮಾಡುವುದು ಶರಣಾ। ಗತರಕ್ಷಕನೆಂದು ನಿನ್ನನು। ಮತ ವಿಡಿದು ನಂಬಿದೆನು ರಕ್ಷಿಸು ನಮ್ಮನನವರತ।। ನಿನ್ನ ಸೂತ್ರದೊಳಾಡುವುವು ಚೈ। ತನ್ಯ ಸಚರಾಚರಗಳೆಲ್ಲವು। ನಿನ್ನ ಸೂತ್ರವು ತಪ್ಪಿದರೆ ಮೊಗ್ಗುವು ವು ಹಾಳೆಗಳು। ಇನ್ನು ನಮಗೆ ಸ್ವತಂತ್ರವೆಲ್ಲಿಯ ದನ್ಯ ಕರ್ಮ ಸುಕರ್ಮವೆಲ್ಲವು। ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ।।

ದೇವದೇವ ಜಗದ್ಭರಿತ ವಸು। ದೇವ ಸುತ ಜಗದೇಕ ನಾಥರ। ಮಾವಿನೋದಿತ ಸಕಲ ಸಜ್ಜನವಿನುತ ಗುಣಭರಿತ। ಭಾವಜಾರಿಪ್ರಿಯ ನಿರಾಮಯ। ರಾವಣಾಂತಕ ರಘುಕುಲಾನ್ವಯ। ದೇವ ಅಸುರವಿರೋಧಿ ರಕ್ಷಿಸು ನಮ್ಮನನವರತ।। ಲೋಕದೊಳಗತ್ಯಧಿಕವೆನಿಸುವ। ಕಾಗಿ ನೆಲೆ ಸಿರಿಯಾದಿಕೇಶವ। ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು। ಜೋಕೆಯಲಿ ಬರೆದೋದಿಕೇಳ್ವರ। ನಾಕುಲದಿ ಮಾಧವನು ಕರುಣಿಪ। ಶ್ರೀಕಮಲ ವಲ್ಲಭನು ಮಿಗೆಬಡದಾದಿ ಕೇಶವನು।।

## ಮರುಳ ಮುನಿಯನು ನಾನು (ಮರುಳ ಮುನಿಯನ ಕಗ್ಗ)

ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ। ಕೊರಗೆನ್ನೆದೆಯು ತಿತ್ತಿಯೊಳಗೆ ತುಂಬಿಹುದು। ಸುರಿವೆನದನಿಲ್ಲಿ ಸಾಧುಗಳ ಸರಿಪೇಳರುಂ ಗುರುವಲೇ ಜಗನಮಗೆ-ಮರುಳು ಮುನಿಯೇ।।

ನೂರು ನೂರ್ ಗುಡಿಗಳಲಿ ನೂರ್ ನೂರ್ ಪೆಸರುಗಳ। ನೂರು ನೂರಾಕೃತಿ ವಿಲಾಸ ವಿಭವಗಳಿಂ-। ದಾರಾಧನೆಯನಾವನಂಗೀಕರಿಪನೊ ಅವ-। ನೋರುವಂಗೀ ನಮನ-ಮರುಳ ಮುನಿಯ॥

ಜಗಕೆಲ್ಲ ಕಾರಣಂ ಪ್ರೇರಣಂ ಧಾರಣಂ। ಭಗವಂತನೆಂಬೊಂದದೇನೋ ಇಹುದಲ್ತೆ। ಬಗೆವನಾಮದರ ಸಂಬಂಧಗಳ ಗೂಢಮಧು ಮುಗಿವೆ ಕೈಗಳನದಕೆ - ಮರುಳಮುನಿಯ॥

ಆಟಕಂದಳಿಯುಂ ಮರಳಿನಲಿ ಮನೆಕಟ್ಟಿ ಊಟನಲಿದಣುಗನೇಕೋ ನಾಟಕವು ಸಾಕೆಂದು ಮನೆಯ ನೊದೆದೊಡೆವುದಕೆ ಸಾಟಿಯೋ ಶಿವನೃತ್ಯ-ಮರುಳ ಮುನಿಯೆ॥

## ಶ್ರೀ ವಿಷ್ಣುವಿಶ್ವಾದಿಮೂಲ (ಮಂಕುತಿಮ್ಮನ ಕಗ್ಗ)

ಶ್ರೀವಿಷ್ಣು ವಿಶ್ವಾದಿಮೂಲ ಮಾಯಾಲೋಲ। ದೇವ ಸರ್ವೇಶ ಪರಬೊಮ್ಮನೆಂದು ಜನಂ। ಆವುದನು ಕಾಣದೊಡಮಳ್ತಿಯಿಂ ನಂಬಿಹುದೊ। ಆ ವಿಚಿತ್ರಕೆ ನಮಿಸೊ ಮಂಕುತಿಮ್ಮ ॥11॥ ಜೀವ ಜಡರೂಪ ಪ್ರಪಂಚ ವನಾವುದೋ। ಆವರಿಸಿಕೊಂಡುದೊಳನೆರೆದು ವಿಹುದಂತೆ। ಭಾವಕೊಳ ಪಡದಂತೆ ಅಳತೆಗಳವಡದಂತೆ। ಆ ವಿಚಿತ್ರಕೆ ನಮಿಸೊ ಮಂಕುತಿಮ್ಮ॥2॥ ಒಂದೆ ಗಗನವ ಕಾಣುತೊಂದೆ ನೆಲವನು ತುಳಿಯುತೊಂದೆ ಧಾನ್ಯವನುಣ್ಣುತೊಂದೆ ನೀರ್ಗುಡಿದು। ಒಂದೆ ಗಾಳಿಯನುಸಿರ್ವ ನರಜಾತಿಯೊಳಗೆಂತು। ಬಂದುದೀ ವೈಷಮ್ಯ? ಮಂಕುತಿಮ್ಮ॥3॥ ಅರಿಮಿತ್ರ ಸತಿ ಪುತ್ರ ಬಂಧು ಬಳಗವದೆಲ್ಲ। ಕರುಮದವತಾರಗಳೊ, ಋಣಲತೆಯ ಚಿಗುರೋ। ಕುರಿಯನಾಗಿಸಿ ನಿನ್ನ ಕಾಪಿಡುವ ಸಂಸಾರ। ಉರಿಮಾರಿಯಾದೀತೋ - ಮಂಕುತಿಮ್ಮ॥4॥ ಬದುಕು ಜಟಕಾಬಂಡಿ, ವಿಧಿಯದರ ಸಾಹೇಬ। ಕುದುರೆ ನೀನ್ ಅವನು ಪೇಳ್ದಂತೆ ಪಯಣಿಗರು। ಮದುವೆಗೋ, ಮಸಣಕೋ ಹೋಗೆಂದ ಕಡೆಗೋಡು। ಪದ ಕುಸಿಯೆ ನೆಲವಿಹುದು - ಮಂಕುತಿಮ್ಮ॥5॥ ಅನ್ನದಾತುರಕಿಂತ ಚಿನ್ನದಾತುರ ತೀಕ್ಷ್ಣ। ಚಿನ್ನದಾತುರಕಿಂತ ಹೆಣ್ಣು ಗಂಡೊಲವು। ಮನ್ನಣೆಯ ದಾಹವೀಯೆಲ್ಲಕು ತೀಕ್ಷ್ಣತಮ ತಿನ್ನು ವುದದಾತ್ಮವನೆ - ಮಂಕುತಿಮ್ಮ॥6॥ ಇಳೆಯಿಂದ ಮೊಳಕೆಯೊಗೆವಂದು ತಮಟೆಗಳಿಲ್ಲ। ಫಲಮಾಗುವಂದು ತುತ್ತೂರಿ ದನಿಯಿಲ್ಲ। ಬೆಳಕೀವ ಸೂರ್ಯಚಂದ್ರರದೊಂದು ಸದ್ದಿಲ್ಲ। ಹೊಲಿ ನಿನ್ನ ತುಟಿಗಳನು - ಮಂಕುತಿಮ್ಮ॥7॥ ಮುಂದೇನೊ, ಮತ್ತೇನೊ, ಇಂದಿಗಾ ಮಾತೇಕೆ?। ಸಂದರ್ಭಬರಲಿ, ಬಂದಾಗಳಾ ಚಿಂತೆ। ಹೊಂದಿಸುವನಾರೊ, ನಿನ್ನಾಳಲ್ಲ, ಬೇರಿಹನು। ಇಂದಿಗಿಂದಿನ ಬದುಕು - ಮಂಕುತಿಮ್ಮ॥8॥ ಗತಿಯೇನು ಎನಗೆನುತ ಕೇಳ್ವವರೆ ಎಲ್ಲರುಂ। ಹಿತವೆಂತು ಜಗಕೆಂದು ಕೇಳುವವರಾರು?। ಮತಿಯ ವಿಶ್ವದಿ ಬೆರಸಿ ಜೀವಿತವ ವಿಸ್ತರಿಸೆ। ಪಥ ಮುಕ್ತಿಗಾಗಳೇ - ಮಂಕುತಿಮ್ಮ ॥9॥ ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆ ಯಾಗು। ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ। ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಗೆ। ಎಲ್ಲರೊಳಗೊಂದಾಗು ಮಂಕು ತಿಮ್ಮ॥10॥ ನೂರಾರು ಮತವಿಹುದು ಲೋಕದುಗ್ರಾಣದಲಿ। ಆರಿಸಿಕೊ ನಿನ್ನ ರುಚಿಗೊಪ್ಪುವುದ ನದರೊಳ್। ಸಾರದಡುಗೆಯನೊಳ ವಿಚಾರದೊಲೆಯಲಿ ಮಾಡು। ಬೇರೆ ಮತಿ ಬೇರೆ ಮತ - ಮಂಕುತಿಮ್ಮ॥11॥ ಶರಣುವೊಗು ಜೀವನರಹಸ್ಯದಲಿ ಸತ್ವದಲಿ। ಶರಣು ಜೀವನವ ಸುಮವೆನಿಪ ಯತ್ನದಲಿ। ಶರಣಂತರಾತ್ಮಗಂಭೀರ ಪ್ರಶಾಂತಿಯಲಿ। ಶರಣು ವಿಶ್ವಾತ್ಮದಲಿ - ಮಂಕುತಿಮ್ಮ ॥12॥

## ಶ್ರೀವನಿತೆಯರಸನೆ (ಕುಮಾರವ್ಯಾಸನ–ಕರ್ನಾಟ ಭಾರತಕಥಾಮಂಜರಿ–ಸಭಾಪರ್ವ– ಭಾಮಿನೀ ಷಟ್ಪದಿ)

ಶ್ರೀವನಿತೆಯರಸನೆ ವಿಮಲರಾಜೀವ ಪೀಠನ ಪಿತನೆ। ಜಗಕತಿ ಪಾವನನೆ ಸನಕಾದಿ ಸಜ್ಜನನಿಕರ ದಾತಾರ ರಾವಣಾಸುರ ಮಥನ ಶ್ರವಣ ಸುಧಾ ವಿನೂತನ ಕಥನ ಕಾರಣ ಕಾವುದಾನತ ಜನವ ಗುದುಗಿನ ವೀರ ನಾರಯಣ॥1॥ ತಾಯೆ ಬಿನ್ನಹವಿಂದು ನಿಮ್ಮಯ ರಾಯ ಸೋತನು ಜೂಜಿನಲಿ ಕುರು-ರಾಯ ಗೆಲಿದನು ಕೋಶವನು ಗಜತುರುಗ ರಥಸಹಿತ ನೋಯಲಾಗದು ಹಲವು ಮಾತೇ ನಾ ಯುಧಿಷ್ಠಿರ ನೃಪತಿ ಸೋತನು ತಾಯೆ ಭೀಮಾರ್ಜುನ ನಕುಲ ಸಹದೇವ

ನೀವ್ಸಹಿತ।।2।। ತಮ್ಮ ಬಾರ್ಯೆ ಹೋಗುದಿಟನೀ ನಮ್ಮುವರೆ ಹಿಡಿದೆಳೆದು ತಾ ನೃಪರೆಮ್ಮ ಕಿಂಕರರೈವರಿದ್ದೇನ ಮಾಡುವರು ತಮ್ಮ ಕರ್ಮವಿಪಾಕ ಗತಿ ನೆರೆ ತಮ್ಮನೇ ಕೆಡಿಸುವುದು ಧರ್ಮ ವಿದೆಮ್ಮ ಕಾರಣವಲ್ಲ ನೀ ಹೋಗೆಂದನಾ ಭೂಪ।।3।। ಬೆದರುಗಂಗಳ ಬಿಟ್ಟು ಮಂಡೆಯ ಹುದಿದ ಹಾಹಾರವದ ತೊಡಕಿದ ಪದಯುಗದ ಮೇಲುದಿನ ಬೀದಿಯ ಧೂಳಿ ಧೂಸರದ ವದನಕಮಲದ ಖಳನ ವಾಮಾಂಗದಲಿ ಬಾಗಿದ ತನುಲತೆಯ ವರ ಸುದತಿ ಬಂದಳು ರಾಜಸಭೆಗೆ ನೃಪಾಲ ಕೇಳೆಂದ।।4।। ಹಾರ ಪದಕ ಕಿರೀಟ ಮಣಿ ಕೇಯೂರ ಕರ್ಣಾಭರಣ ವೆಂಬಿವು ಭಾರವಲ್ಲಾ ತೆಗೆಯ ಹೇಳ್ ದಾಕ್ಷಿಣ್ಯವೇನಿದಕೆ। ನಾರಿಗೀ ವಸ್ತ್ರಾಭರಣ ಶೃಂಗಾರ ವೇಕಿನ್ನಿವನು ತೆಗೆ ಕೈ ವಾರವಿದಕೇಕೆಂದು ದುಶ್ಶಾಸನಗೆ ನೇಮಿಸಿದ।।5।। ತೆಗೆದು ಬಿಸುಟರು ಹಾರ ಪದಕಾದಿಗಳನಿವರೈವರು ದುಕೂಲವ ನುಗಿದು ಹಾಯ್ಕಿದರಿದ್ದರಿವ ರೊಂದೊಂದು ವಸ್ತ್ರದಲಿ ಹೊಗೆಮೊಗದ ಕಿಡಿಗಣ್ಣ ಕೆಮ್ಮೀಸೆಗಳ ಗುಜುರಿನ ಜುಂಜು ಗೇಶದ ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆರಗ।।6।। ಧಾರುಣೀಪತಿಗಳಿರ ರಾಜಕುಮಾರರಿರ ಮಂತ್ರಿಗಳಿರಾ ಪರಿವಾರಕಿದು ಪಂಥವೆ ವಿಚಾರಿಸಿ ನಿರಪರಾಧಿಯನು ನಾರಿಯೊಬ್ಬಳನಕಟ ಸಭೆಯಲಿ ಸೀರೆಯುಡಿಯುರ್ಚುವರು ಕೆಟ್ಟೆನು ಕಾರಣಿಕರಿಲ್ಲಾ ಶಿವಾಯೊಂದೊರಲಿದಳು ತರಳೆ।।7।। ಸುಲಿವರೂರೊಳಗುಟ್ಟ ಸೀರೆಯ ನೆಲೆಮುರಾಂತಕ ರಕ್ಷಿಸೈ ಶಶಿ ಕಳೆಗೆ ಸದರವೆ ರಾಹುರಚಿಸಿದ ತುಟಿಯ ತೋಟಿಯದು ಸೆಳೆವರಸುವನು ಖಳರು ಸೀರೆಯ ಸುಲಿದರುಳಿಯೆನು ಕೃಷ್ಣ ಕರುಣಾ ಜಲಧಿಯೆ ಕೈಗಾಯಬೇಕೆಂದೊರಲಿದಳು ತರಳೆ।।8।। ಗತಿವಿಹೀನರಿಗಕಟ ನೀನೇ ಗತಿಯಲ್ಲೆ ಗೋವಿಂದ ರಿಪು ಬಾಧಿತರಿಗಬಲರಿಗಾರ್ತರಿಗೆ ನೀ ಪರಮ ಬಂಧುವಲ ಸತಿ ಪಶು ದ್ವಿಜ ಭಾದೆಯಲಿ ಜೀವಿತವ ತೊರೆವರು ಗರುವರದು ಹಿಂಗಿತೆ ಸುಯೋಧನ ಸಭೆಯೊಳೆಂದೊ ರಲಿದಳು ಲಲಿತಾಂಗಿ।।9।। ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ ಬಲು ಹಳುವದಲಿ ತಾಯ್ಬೆಸುಟ ಶಿಶು ತಾನಾದೆನೆಲೆ ಹರಿಯೆ ಕೊಲುವವೈ ಕಾಗೆಗಳಕಟ ಕೋಗಿಲೆಯ ಮರಿಯನು ಕೃಷ್ಣ ಕರುಣಾ ಜಲಧಿಯೇ ಕೈಗಾಯ ಬೇಕೆಂದೊರಲಿದಳು ತರಳೇ।।10।। ಮರೆದೆರ ಭ್ಯುದಯದಲಿ ನೀನೆಂದರಿವೆನಾಪತ್ತಿನಲಿ ಮದದಲಿ ಮುರುಕಿಸುವೆ ನುಬ್ಬಿನಲಿ ಕಳವಳಿಸುವೆನು ಖೋಡಿಯಲಿ ಅರಿಯದಜ್ಞರ ಗುಣವ ದೋಷವನರಸುವರೆ ನಿನ್ನಡಿಯ ಕೃಪೆಯನು ಮರೆಯಲಾಗದೆ ಕೃಷ್ಣಯೆಂದೊರಲಿದಳು ನಳಿನಾಕ್ಷೀ।।11।। ನಂದಗೋಪ ಕುಮಾರ ಗೋಪೀವೃಂದ ವಲ್ಲಭ ದೈತ್ಯಮಥನ ಮುಕುಂದ ಮುರಹರ ಭಕ್ತವತ್ಸಲ ಘನ ಕೃಪಾಜಲಧೆ ನೊಂದೆನೈ ನುಗ್ಗಾದೆನೈ ಗೋವಿಂದ ಕೃಪೆ ಮಾಡಕಟೆನುತ ಪೂರ್ಣೇಂದುಮುಖಿ ಹಲುಬಿದಳು ಬಲು ತೆರದಿಂದಲಚ್ಯುತನ।।12।। ಇತ್ತ ದ್ವಾರಾವತಿಯೊಳಗೆ ದೇವೋತ್ತಮನು ಭಕುತರಿಗೆ ತನ್ನನು ತೆತ್ತು ಬದುಕುವನೆಂಬ ಪರಮ ವ್ರತದ ನಿಷ್ಠೆಯನು ಚಿತ್ತದಲಿ ನೆಲೆಗೊಳಿಸಿ ರುಕ್ಮಿಣಿ ಸತ್ಯಭಾಮೆಯರೊಳು ಸಮೇಳದ ನೆತ್ತ ಸಾರಿಯ ಹರಹಿ ಹಾಸಂಗಿಯನು ದಾಳಿಸುತ।।13।। ಕೇಳಿದನು ಮುರವೈರಿ ತನ್ನಯ ಮೇಳದೈವರ ಸತಿಯ ಹುಯ್ಯಲನಾಳಿ- ನೊಂದಪಮಾನವಾಳ್ದಂಗೆಂಬ ನುಡಿಯಿಂದ ಕೋಳು ಹೋದುವೆ ಪಾಂಡುಪುತ್ರರ ಬಾಳುವೆಗಳ ಕಟೆನುತ ಲಕ್ಷ್ಮೀಲೋಲ ಚಿಂತಿಸಿ ನುಡಿದ ರುಕ್ಮಿಣೀದೇವಿಗೀ ಹದನ।।14।। ಕ್ರೂರದುರ್ಯೋಧ ನನು ದ್ರುಪದಕುಮಾರಿ ಪಾಂಚಾಲೆಯನು ಸಭೆಯಲಿ ಸೀರೆಯನು ಸುಲಿಯಲ್ಕೆ ಕಾಯ್ಯೆ ಕೃಷ್ಣಯೆಂದೆನುತ ನಾರಿಯೊರಲುತ್ತಿಹಳು ವುಟ್ಟಾಸೀರೆ ಸೆಳೆಯಲು ಬಳಿಕಲಕ್ಷಯ ಸೀರೆಯಾಗಲಿ ಯೆಂದು ಗದುಗಿನ ವೀರ ನಾರಯಣ।।

## ಹಗಲೊಗೆದ ಚಂದ್ರಕಳೆಯಂತೆ (ರಾಘವಾಂಕನ ಹರಿಶ್ಚಂದ್ರ ಕಾವ್ಯ-ರಾಜ್ಯ ಸಮರ್ಪಣೆ-ವಾರ್ಧ ಕಷಟ್ಪದಿ)

ಹಗಲೊಗೆದ ಚಂದ್ರಕಳೆಯಂತೆ ಬಿರುವೈಶಾಖ। ವಗಿದ ಬನದಂತೆ ಬಿಸಿಲೊಳು ಬಿಸುಟ ತಳಿರಂತೆ ಮೊಗ ಕಂದಿ ಕಳೆಗುಂದಿಯರುವೆಗಪ್ಪಡವುಟ್ಟ ರಾಗವಳಿದೊಪ್ಪಗೆಟ್ಟು। ಮಗನರಸಿಮಂತ್ರಿ ಸಹಿತವನಿಪಂ ಹಿಂದೆ ದೇಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು। ಬಗೆ ಬೆದರಿ ಹೊದ್ದಿ ಹೊಡೆವಟ್ಟು ಕಾಣಿಕೆಯ ಚಿತ್ತೈಸುಭೂ ಭುಜ ಎಂದರು ।।1।। ಎನಗರಸುತನ ಮಾದು ಹೋಗಿ ವಿಶ್ವಾಮಿತ್ರ ಮುನಿಗಾದುದಾತನಂ ಕಂಡು ಕಾಣಿಕೆಯನಿತ್ತನುದಿನಂ ಬೆಸಕೈವುದೆ

ನಲೊಲ್ಲೆವೆನಲು ಬೋಧಿಸಿ ಬಲಾತ್ಕಾರದಿಂದ। ಜನವ ಕಾಣಿಸಿ ಕಾಣಿಕೆಯ ಕೊಡಿಸಿ ಹಿಂದುಗೊಂಡಿನಕುಲ-ಲಲಾಮನೆಯ್ತಂದು ಪುರವಂ ಹೊಕ್ಕು ಮನದೊಳುತ್ಸವದ ಹೆಚ್ಚುಗೆಯಳಿದು ನಿಂದ ಮಂದಿಯ ನೋಡುತಂ ನಡೆದನು।।2।। ನೂಕಿ ನಡೆದರಮನೆಯ ಹೊಕ್ಕು ಸಿಂಹಾಸನಕ್ಕಾ ಕೌಶಿಕಂ ಬಂದು ಭೂಭುಜನ ಕೈಯ ಪಿಡಿದೀ ಕಟಕವೀ ಕೋಟೆಯೀಕರಿಗಳೀ ತುರಗವೀ ರಥಗಳೀ ಪರಿಜನ। ಈ ಕೋಶವೀ ಕಾಂತೆಯೀ ಕುವರನೀ ಮಂತ್ರಿಯೀ ಕಾಮಿನೀಜನಂ ಮರುಗದಂತರಸಾಗ ಬೇಕಾದಡೆನ್ನ ಮಕ್ಕಳ ಮದುವೆಯಾಗು ಕಾಡದೆ ಬಿಟ್ಟು ಹೋಹೆನೆಂದ।।3।। ಒಲ್ಲದಿರಬೇಡ ಲೇಸೊಲ್ಲೆಯೇ ಕೊಲ್ಲೆಯೆಮ್ಮಲ್ಲಿ ತಪ್ಪಿಲಾದಡಿನ್ನು ನೀನೀಗ ನಿನಗುಳ್ಳ ಪರಿವಾರಮಂ ಕರಸು ಬೇಗದಲಿಂತು ಚತುರಂಗ ಬಲಸೇನೆಯ। ಸಲ್ಲಲಿತ ದೇಶಕೋಶವನು ಕಟಕವನವಕ್ಕುಳ್ಳ ಕುಲಕರಣ ದುರ್ಗಂ ಮುದ್ರೆ ಮೊದಲಾದುವೆಲ್ಲವಂ ಬಿಡದೊಪ್ಪುಗೊಟ್ಟು ಹೋಗೇಳೆನಲು ಕರಸಿದಂ ಭೂನಾಥನು।।4।। ಇದು ರತ್ನಭಂಡಾರವಿದು ಹೇಮಭಂಡಾರವಿದು ಸುನಾಣೆಯ ವರ್ಗವಿದು ಪಟ್ಟಕರ್ಮಕುಲವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣವಿದು ಸರ್ವಶಸ್ತ್ರಶಾಲೆ। ಇದು ಹಸ್ತಿಸಂದೋಹವಿದು ತುರುಗಸಂತಾನವಿದು ವರೂಥಪ್ರಕರವಿದು ಪದಾತಿವ್ರಾತವಿದ ನೋಡಿಕೋಯೆನುತೊಪ್ಪಿಸಿದನಾ ಮುನಿಗೆ ಭೂನಾಥಕಂದರ್ಪನು।।5।। ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವದರಮನೆಯಿದಖಿಳ ಪರಿವಾರವಿದು ಸಿವುಡಿಯಿದು ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ ಎಂದು। ವರಕೌಶಿಕಂಗೊಪ್ಪುಗೊಟ್ಟೆಲ್ಲ ಸಂದುದೇ ಪರಿಣಾಮವೇ ಇನ್ನು ಹೋಹೆನೇ ಮುನಿನಾಥ ಕರುಣಿಸಿದರೇ ಎಂದು ಪೊಡವಂಟು ಹೋಹರಸ ನೋಡನೆದ್ದನಾ ಮುನಿಪನು।।6।। ಹೊರಗೆ ದಾನವ ಬೇಡುವವರುಂಟೆ ಕೊಟ್ಟು ಬೇಸರದ ಮುಗುದರಸು ದೊರಕಿದನಲಾ ಎಂದು ಕಟ್ಟರೆಗಂಡ ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ ನೀಚ ನೀರಸ ನಿರ್ಗುಣ। ನೆರೆಕೊಂದೆ ನಂಬಿ ನೆಚ್ಚಿರ್ದರೆಮ್ಮೊಡಲೊಳಳ್ಳಿರಿಯುತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ ನಿರಿಯದೇ ಹೇಳು ವಿಶ್ವಾಮೃತ್ಯುವಾದೆ ವಿಶ್ವಾಮಿತ್ರ ಎನುತಿರ್ದರು।।7।। ವಸುಧೆ ಬಾಯ್ಬಿಡೆ ದೆಸೆಗಳಸವಳಿದು ಮರುಗೆ ನಿಟ್ಟಿಸಲಾರದಂ ಬರಂ ಕಂಬನಿಯನುಗುಳೆ ಶೋಕಿಸುವ ಪರಿಜನದಳಲನಾರಿಸುತ ಪಾಲಿಸುತ ಸರದೋರಿ ಸಂತವಿಡುತ। ಮಸಗಿ ಪುರಮಂ ಮೀರಿ ಹೋಗುತ್ತ ಹಿಂದೆ ಸಂದಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ ನೊಸೆದು ನಿಲಿಸುವ ಭರದೊಳೊಂದೆರಡು ಮಾತನಾಡಿದನದೇವಣ್ಣೆಸುವೆನು।।8।। ಮನದೊಳಗೆ ಮರುಗದಿರಿ ಚಿಂತಿಸದಿರಳಲದಿರಿ ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆರಡನೆಯ ಶಿವನೆನಿಪ ಕೌಶಿಕನೊಡೆಯ ನಾದನಾತನ ಪಾದಪಂಕಜಕ್ಕೆ। ಎನಗೆ ಬೆಸಕೈವಂತೆ ಬೆಸಕೈವುದಂಜವುದು। ವಿನಯಮಂ ನುಡಿವುದೋಲೈಸುತ್ತಿಹು ದೆಂದು ಪರಿಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯನಿಧಿ ಹರಿಶ್ಚಂದ್ರನೃಪನು।।9।। ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂವರನು ಮೊದಲನ್ವಯಾ ಗತವಾಗಿ ಬಂದುದೀ ಪರಿವಾರವೀ ದೇಶವೀ ನಗರವಿಂದುತನಕಾವೆಡರು- ಬಡತನವನು। ನೆರೆದರಿಯದಯ್ಯ ನೀವಿನ್ನಿದಂ ರಕ್ಷಿಪುದು ಹೊರೆವುದಿನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ ಕರುಣಿಸೆನಗೆಂದು ಕೈಮುಗಿದು ಮುನಿಗಪ್ಪಯಿಸಿ ಕೊಟ್ಟನು ಹರಿಶ್ಚಂದ್ರನು।।10।।

## ಹರಿಕಥಾಮೃತಸಾರ ಗುರುಗಳ (ಶ್ರೀ ಜಗನ್ನಾಥದಾಸರು – ಭಾಮಿನಿ ಷಟ್ಪದೀ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವುದು।।

ಶ್ರವಣಮನಕಾನಂದವೀವುದು। ಭವಜನಿತ ದುಃಖಗಳ ಕಳೆವುದು। ವಿವಿಧ ಭೋಗಗಳಿಹ ಪರಂಗಳಲಿತ್ತು ಸಲಹುವುದು। ಭುವನಪಾವನನೆನಿಪ ಲಕುಮೀ। ಧವನ ಮಂಗಳ ಕಥೆಯ ಪರಮೋ ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ।।

ಮಲಗಿ ಪರಮಾದರದಿ ಪಾಡಲು। ಕುಳಿತು ಕೇಳುವ ಕುಳಿತು ಪಾಡಲು ನಿಲುವ। ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ। ಸುಲಭನೋ ಹರಿ ತನ್ನವರನರ। ಘಳಿಗೆ ಬಿಟ್ಟಗಲಿರನುರ ಮಾಧವನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ।।

ಶರಣಜನ ಮಂದಾರ ಶಾಶ್ವತ। ಕರುಣಿ ಕಮಲಾಕಾಂತ ಕಾಮದ। ಪರಮ ಪಾವನತರ ಸುಮಂಗಳಚರಿತ ಪಾರ್ಥಸಖ।

ನಿರುಪಮಾನಂದಾತ್ಮ ನಿರ್ಗತದುರಿತ ದೇವವರೇಣ್ಯನೆಂದಾ। ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ॥ ಏನು ಕರುಣಾನಿಧಿಯೊ ಹರಿಮತ್ತೇನು ಭಕ್ತಾಧೀನನೋ ಇನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ। ತಾನೆ ಸೃಜಿಸುವ ಪಾಲಿಸುವನಿ ರ್ವಾಣ ಮೊದಲಾದಖಿಳಲೋಕ। ಸ್ಥಾನದಲಿ ಮತ್ತವರ ನಿಟ್ಟಾನಂದ ಪಡಿಸುವನು॥
ಮನದೊಳಗೆ ಸುಂದರ ಪದಾರ್ಥವ। ನೆನೆದುಕೊಡೆ ಕೈಕೊಂಡು ಬಲುನೂ ತನ ಸುಶೋಭಿತ ಗಂಧಸುರಸೋಪೇತ ಫಲರಾಶಿ। ದ್ಯುನದಿನಿವಗಹಳಂತೆ ಕೊಟ್ಟವ ರನು ಸದಾ ಸಂತೈಸುವನು ಸ ದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ॥
ತಂದೆತಾಯ್ಗಳು ತಮ್ಮ ಶಿಶುವಿಗೆ। ಬಂದ ಭಯಗಳ ಪರಿಹರಿಸಿ ನಿಜ। ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ। ಹಿಂದೆ ಮುಂದೆಡಬಲದಿ ಒಳಹೊರಗಿಂದಿರೇಶನು ತನ್ನ ವರನೆಂ ದೆಂದುಸಲಹುವ ನಾಗಸದವೋಲೆತ್ತ ನೋಡಿದರೂ॥
ಮೀನಕೂರ್ಮವರಾಹ ನರಪಂ। ಚಾನನಾತುಳ ಶೌರ್ಯವಾಮನ। ರೇಣುಕಾತ್ಮಜ ರಾವಣಾದಿನಿಶಾಚರಧ್ವಂಸಿ। ಧೇನುಕಾಸುರ ಮಥನ ತ್ರಿಪುರವ ಹಾಸಿಗೈಸಿದ ನಿಪುಣ ಕಲಿಮುಖ ದಾನವರ ಸಂಹರಿಸಿ ಧರ್ಮದಿಕಾಯ್ದ ಸುಜನರನು॥ ಶ್ರೀಮನೋರಮ ಶಮಲವರ್ಜಿತ। ಕಾಮಿತಪ್ರದ ಕೈರವದಳ। ಶ್ಯಾಮಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖ। ಸಾಮಸನ್ನುತ ಸಕಲಗುಣಗಣ ಧಾಮ ಶ್ರೀಜಗನ್ನಾಥ ವಿಠಲ ನೀ ಮಹಿಯೊಳವತರಸಿ ಸಲಹಿದ ಸಕಲ ಸುಜನರನು॥

## ಓದದ ಬಾಯಮೃತಾನ್ನವ (ಅಜ್ಞಾತಕವಿ-ಚೂಡಾರತ್ನ ಶತಕ)

ಓದದ ಬಾಯಮೃತಾನ್ನವ ಮೋದದ ಬಾಯ್ ಸಜ್ಜನಂಗಳಂ ಪ್ರಿಯದಿಂದಂ। ಆದರಿಸದ ಬಾಯದು ತಾವ್ ಮೇದಿನಿಯೊಳ್ ಬಿಲದ ಬಾಯಿ ಚೂಡಾರತ್ನ॥1॥ ಬರೆವುದು ವಾಚಿಪುದಲಸದೆ। ಪರಿಚರಿಪುದಲ್ಲಿ ಬಲ್ಲನಿ ತರಳಂ। ಸರಸು ಪ್ರಸಂಗಗೈಯ್ಯಲು ಸರಸಿಜಭವ ರಾಣಿಯೊಲಿಯದೇ ಮಾಣ್ದಪೇಳೆ॥2॥ ಬರೆಯದೆ ಕೈ ಬಂಧುಗಳಂ। ಪೊರೆಯದ ಕೈ ಸುತರನೆತ್ತಿ ಮುದ್ದಾಡದ ಕೈ। ಕರೆದು ಬುಧರ್ಗೀಯದ ಕೈಮರಗೈ ಮರುಳ್ ಗೈಗಳಂತೆ ಚೂಡಾರತ್ನ॥3॥

ಗೋಂಚಲು (18ಕಾವ್ಯಗಳು)

(ವಿಕ್ರಮಾರ್ಜುನ ವಿಜಯಂ) ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರ ಕೊಂಡುಮಾತ್ಮೀಯ ಸುಪುಷ್ಪವೃಷ್ಟಿಯನೊಡಂಬಡೆ ತಾಳ್ದಿಯುಮಿಂತು ದಾತ್ತನಾ ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ॥1॥

(ಪೊನ್ನ ಕವಿಯ ಶಾಂತಿ ಪುರಾಣ) ಪರಮ ಶ್ರೀ ಸ್ನೇಹಗೇಹಾಯುತ ಪದಕಮಲಂ ಚೇತನಾಚೇತನಾಂಗ ಸ್ಫುರಿತಾ ಘೌಘಟ್ಟಿದಂ ಭಾಸುರ ಸುರನರ ಸದ್ಭವ್ಯ ಸೇವ್ಯಂವಚೋವಿ ಸ್ತರ ತೃಪ್ತಿ ವ್ಯಾಪ್ತ ಲೋಕ ತ್ರಿನಯನಪಗತಾಶೇಷ ದೋಷಾಳಿಮುಕ್ತಿ ಸ್ಥಿರ ಸೌಖ್ಯಾಂಭ ಸ್ಸ್ವಯಂಭೂರಮಣ ಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ॥2॥

(ರನ್ನನ ಗದಾಯುದ್ಧ) ಶ್ರೀಯುವತೀ ಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿ ವೈತೇಯನನಂತ ಭೋಗನಿಲಯಂ ಪ್ರತಿಪಾಲಿತ ಧರ್ಮಚಕ್ರನ ಬ್ಜಾಯತನೇತ್ರನಾದಿ ಪುರುಷಂ ಪುರುಷೋತ್ತಮ ನೀ ಚಳುಕ್ಯನಾರಾಯಣ ದೇವನಿಗೆಮಗೆ ಮಂಗಳಕಾರಣ ಮುತ್ಸ ಮಂಗಳಂ ॥3॥

(ಕರ್ನಾಟಕ ಕಾದಂಬರಿನಾಗವರ್ಮ) ಶ್ರೀಮನ್ನಾಗೇಂದ್ರ ಭೋಗಸ್ಫುರದರುಣಮಣಿದ್ಯೋತಿ ಸಂಧ್ಯಾನಿಬದ್ಧ ಪ್ರೇಮಂ ಪ್ರೋದ್ಯಕ್ತರಂ ಗೋಚ್ಚರದಮರ ನದೀ ಶೀಕರೋದಾರ ತಾರಾ ರಾಮಂ ಹೇಮಪ್ರಭಾ ಪ್ರಸ್ಫೂರಿತ ಗೀರಿಶ ಚಂಚಜ್ಜಟಾಜಾಲಜೂಟ ವ್ಯೋಮ ಪ್ರೋದ್ಭಾಸಿ ಚಂದ್ರಂ ತ್ರಿಭುವನ ಜನಕಾನಂದಮಂ ಮಾಡುಗೆಂದು॥4॥

(ನಾಗಚಂದ್ರ ಅಥವಾ ಪಂಪರಾಮಾಯಣ) ಶ್ರೀ ಕೇಳೀನಿಲಯಂ ನಿಜಾಂಘ್ರಿಕಮಲಂ ವಿದ್ಯಾನಟೀ ನಾಟ್ಯವೇ ದೀಕಲ್ಪಂ ಮುಖ ಚಂದ್ರಬಿಂಬಮಖಿಲೇಂದ್ರೋತ್ತಂಸಮಾಣಿಕ್ಯದೀ ಪಾಕೀರ್ಣಂ ಹರಿಪೀಠಪಾರ್ಶ್ವಮೆನಿಪಂ ಪೂಜಾರ್ಹನಾರ್ಹಂತ್ಯ ಲಕ್ಷ್ಮೀ ಕಾಂತಂ ಮುನಿಸುವ್ರತಂ ನಮಗೆ ಮಾಳ್ಕಿಷ್ಟಾರ್ಥ ಸಂಸಿದ್ಧಿಯಂ॥5॥

**(ಹರಿಹರ – ಪಂಪಾಶತಕ)** ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಂಭುವಂ ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ।।6।।

**(ಗಿರಿಜಾಕಲ್ಯಾಣ)** ಶ್ರೀಮಚ್ಛೈಲೇಂದ್ರ ಪುತ್ರೀ ಗುರುತರ ಹೃದಯ ಕ್ಷೀರವಾರಾಶಿ ಚಂದ್ರಂ ವ್ಯೋಮಾರ್ಕೇಂದು ಕ್ಷಮಾತ್ಮಾನಲ ಜಲ ಪವಮಾನಾಷ್ಟಮೂರ್ತಿ ಪ್ರಸಿದ್ಧಂ ಪ್ರೇಮಂ ಬೆತ್ತೀಗೆ ಸದ್ಭಕ್ತಿಯನೆಮಗಮರಾನೀಕ ಮಾಣಿಕ್ಯ ಮೌಳಿ ಸ್ತೋಮಾಂಘ್ರಿಜ್ಯೋತಿ ಪಂಪಾಪುರದರಸ ವಿರೂಪಾಕ್ಷನಂದದಿಂ।।

**(ರಗಳೆ)** ಆಡಿದನಾಡಿದನಾಹಾ ಶಂಕರ। ನಾಡಿದನಾ ಗುಂಡನ ಮುಂದೀಶ್ವರ। ಶಿವನಂ ಕಂಡಾ ಭಕ್ತಂ ಕುಣಿಯಲು। ಶಿವಭಕ್ತನ ಕೂಡ ಭವಂ ಕುಣಿಯಲು। ದೇವ ಸದಾಶಿವ ಶಾಂತ ಪ್ರಭುವೆ। ದೇವ ಸುಧಾಕರ ಧರ ಮನುವಿಭುವೆ। ಮಡಕೆಯ ಶಬ್ದಕ್ಕಾಡುತ್ತಿರ್ದಂ। ಮೃಡನಖಿಳಂ ಬೆರಸಾಡುತ್ತಿರ್ದಂ।।7।।

**(ಜನ್ನ-ಯಶೋಧರ ಚರಿತ್ರೆ)** ಪುರುದೇವಾದಿಗಳೊಲಿಸಿದ ಪರಮ ಶ್ರೀವಧುವನೊಲಿಸಿಯುಂ ಪರವನಿತಾ ನಿರಪೇಕ್ಷಕನೆನಿಸಿದ ದೇವರದೇವಂ ಕುಡುಗೆ ಸುವ್ರತಂ ಸುವ್ರತಮಂ।।8।।

**(ಕವಿರುದ್ರಭಟ್ಟ-ಶ್ರೀ ಜಗನ್ನಾಥವಿಜಯ)**ಶ್ರೀರಾಮನಾಟ ಕೌಸ್ತುಭದ್ಯುತಿ ಕಿರತ್ಪುಷ್ಪಾಂಜಲಿಕ್ಷೇಪವ। ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋಟೀ। ರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂ। ಭಾರ ಚ್ಛೇದ ವಿನೋದಿ ಕೃಷ್ಣನೆ ಮುಗೀಗಾನಂದ ಸಂದೋಹಮಂ ।।9।।

**(ಚಾಮರಸ ಪ್ರಭುಲಿಂಗಲೀಲೆ)** ಶ್ರೀಮದಲ ಜ್ಞಾನ ಭಕ್ತಿ ಪ್ರೇಮ ವೇದ ಪುರಾಣ ಶಾಸ್ತ್ರ। ಸ್ತೋಮನುತ ನತ ಚಾರುಚರಣಾಂಭೋಜ ಘನಮಹಿಮ ನಾಮ-ರೂಪ-ಕ್ರಿಯಾಕಳಾಪ ವಿ ರಾಮನನುಪಮದಿವ್ಯ ತೇಜೋ। ವ್ಯೋಮಮೂರುತಿ ಗುರು ಗುಹೇಶ್ವರ ಲಿಂಗ ಶರಣಾರ್ಥಿ।।

**(ನರಹರಿ–ತೊರವೆ ರಾಮಾಯಣ)** ಶ್ರೀಜನಕಜಾರಮಣ ವಿಮಲ। ಸರೋಜ ಸಂಭವ ಜನಕನನುಪಮ ರಾಜಶೇಖರ ವಿನುತ ನಿಖಿಳಾಮರ ಕಿರೀಟಚಯ ರಾಜಿತಾಮಲ ಲಲಿತಪದಪಂ। ಕೇಜನಾನತಜನ ದಯಾಸುರ। ಭೂಜ ತೊರವೆಯ ರಾಯ ನರಹರಿ ಪಾಲಿಸುಗೆ ಜಗವ।।9-ಎ।।

**(ಭಾಗವತ–ನಿತ್ಯಾತ್ಮಶುಕಯೋಗಿ)** ಶ್ರೀವರನು ಶಾಶ್ವತನಖಿಳ ವೇ। ದಾವಳೀ ಸಂಸ್ತುತ್ಯನಖಿಳ ಗುಣಾವಲಂಬನಅಂಬುಜೋದ್ಭವಮುಖ್ಯ ಸುರವಂದ್ಯ ದೇವ ದೇವನ ಶೇಷಧರಣೀ। ದೇವಗೋದ್ವಿಜ ರಕ್ಷಣಾರ್ಥಕೃತಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೆ।।10।।

**(ರತ್ನಾಕರವರ್ಣಿ–ಭರತೇಶವೈಭವ ಸಾಂಗತ್ಯ)** ಪರಮ ಪರಂಜ್ಯೋತಿ ಕೋಟಿ ಚಂದ್ರಾದಿತ್ಯ ಕಿರಣ ಸುಜ್ಞಾನ ಪ್ರಕಾಶ ಸುರರ ಮಕುಟಮಣಿ ರಂಜಿತ ಚರಣಾಬ್ಜ ಶರಣಾಗು ಪ್ರಥಮ ಜನೇಶ।।11।।

**(ವಿರೂಪಾಕ್ಷ ಪಂಡಿತಾರಾಧ್ಯ–ಚನ್ನಬಸವಪುರಾಣ)** ಶ್ರೀ ಗಿರಿಜೆಯಾಸ್ಯ ಕಮಳದ ಸೊಂಪು ಪೊಳೆಯೆ ಪಿರಿದಾಗಿ ಕುಚಚಕ್ರಯಮಳದ ಪೆಂಪು ಬಳೆಯೆ ತಲೆವಾಗಿ ಕನ್ನೈದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ ಬೀಗೆ ಕುಂತಳತಮಂ ಸಾಗೆ ಚೆಂದುಟಿಗಂಪು। ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯನಾಗೆಸೆವೆ ಪಂಪಾ ವಿರೂಪಾಕ್ಷಸೂರ್ಯನಾಂನಂದಮಂ ನಮಗೀಯಲಿ।।12।।

**(ಷಡಕ್ಷರದೇವ–ಶಬರಶಂಕರ ವಿಳಾಸ)** ಶ್ರೀಮತ್ಕಲ್ಯಾಣರೂಪಂ ಶರಭವನಜೋತ್ಸಂಗನ ಭ್ರಾಂತಯೋಗಾರಾಮಾಂಚತ್ಪಾದಪದ್ಮಂ ಸುರುಚಿಗಣಪ ವಿಭ್ರಾಜಿತಂ ಸಾರಸತ್ವಂ ವ್ಯಾಮಿಶ್ರಾಹೀನ ಚಂಚತ್ಕಟಕನಧಿಕದಿವ್ಯಗಮಂಸ್ವಸ್ತಿಲೋಕ ಸ್ತೋಮಂ ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತ ಭಾಸ್ವತ್ಪ್ರಕಾಶಂ ಗಿರೀಶಂ।।13।।

**(ಪರಮದೇವ–ತುರಂಗ ಭಾರತ)** ಶ್ರೀಮಹಾಗಣಪ ನಿರ್ವಿಘ್ನತೆಯ ಮಾಡಿಸು ಕ್ಷೇಮದಿಂದೆನಗೆ ಕಾಮಿತ ಫಲವನಿತ್ತು ನಿಸ್ಸೀಮ ಸುಜನಸ್ತೋಮ ನಮಿತ ಇಕ್ಷುಪ್ರೇಮನಾಮಕರ್ತರಾಮನೆ ಸೋಮಭೂಷಣ ಸಾಮಗಾನ ಭಕ್ತಪ್ರೇಮ ಹೇಮರತ್ನ

ಕಿರೀಟಧಾಮ ಶೃಂಗಾರಗುಣ ಕಾಮ ಹೋಮನ ಪುತ್ರಗಣಪ ಮಾಡೀಕೃತಿಗೆ ಸ್ವಾಮಿ ನಿರ್ವಿಘ್ನತೆಯನು॥14॥

**(ನಂದಳಿಕೆ ಲಕ್ಷ್ಮೀನಾರಾಯಣಪ್ಪ ಅಥವಾ ಮುದ್ದಣ್ಣ ಶ್ರೀರಾಮಪಟ್ಟಾಭಿಷೇಕ)** ಶ್ರೀಮದ ಚಲಾತ್ಮಜಾನನ ಕೈರವಾಬ್ಜಂ ನಿರಾಮಯಂ ದಿವ್ಯಕೇಶಂ ರಾಜಶೇಖರಂ ಸಾಮಗಾನಪ್ರಿಯಂ ಹರಿಸುತಾಹಿತನಹೀನಾಲಂಕೃತಾಂಗಂಶಿವಂ ಕಾಮಮುಖ್ಯಾರಿವರ್ಗಧ್ವಂಸಿ ಭೂತಪತಿ ಭೀಮ ವಿಕ್ರಮಿ ಪುಣ್ಯಜನವಂದಿತಂ ಸದಾ ರಾಮನೊಲಿದೀಗೆಮಗೆ ಕಾಮಿತಾರ್ಥಂಗಳಂ ಮಂಗಳಂ ಗೋತ್ರೇಶ್ವರಂ॥15॥

(ವಿದ್ಯೆ) ಜನನಿಯಂದದಿ ಪೋಷಿಸುವುದಾ ಜನಕನಂದದಿ ವಿಹಿತ ಕಾರ್ಯದೊ। ಳನುಗೊಳಿಸುವುದು ಮಿತ್ರನೋಲ್ ದುಃಖವನು ಪರಿಹರಿಸಿ॥ ಮನವ ಸಂತೋಷಿಪುದು ಕೀರ್ತಿಯ ಜನಿಯಿಪುದು ಸಂಪದವನೀವುದು ತನುಜೆಕೇಳ್ ವಿದ್ಯೆ ಸಾಕ್ಷಾತ್ ಕಲ್ಪಲತೆಯೆಂದ॥16॥ (ಕವಿಬಸವಪ್ಪ ಶಾಸ್ತ್ರಿಗಳವರ "ಸಾವಿತ್ರಿ ಚರಿತ್ರೆಯಿಂದ")

**"ಕುಮಾರನಿಜಗುಣಸ್ವಾಮಿ"** ಬೆಳಗುವವನು ರವಿಯಾಗಿ ತೊಳಗುವವನು ಶಶಿಯಾಗಿ ಹೊಳೆಯುವವನು ಹರನು ನಕ್ಷತ್ರವಾಗಿ॥ ಅಳುವವನ ಮಳೆಯಾಗಿ ನಗುವ ಕಮ್ಮಲರಾಗಿ ತಿಳಿಯಲವ ಬಹುರೂಪಿ-ಬೋಳುಬಸವ॥1॥ ಸೋಜಿಗದಿ ರೂಪಿರದೆ ಸಂಪೂಜೆಗೊಳ್ಳುತಿಹ। ಮೂಜಗವ ಲೀಲೆಯಿಂದಾಡಿಸುತಿಹ। ರಾಜಿಸುವ ರವಿಸೋಮ ತಾರೆಗಳ ಬೆಳಗುತಿಹ ತೇಜೋಮಯಿಗೆ ನಮಿಸು॥2॥ ಅಗಿಯಲೆಲೆಯಡಿಕೆ ಮೇಣ್ಸುಣ್ಣವನ್ನೊನಾಗಿ ಮಿಗೆ ಕೆಂಪುಶೋಭಿಪುದು ತುಟಿಯಮೇಲೆ। ತ್ರಿಗುಣಂಗಳಿಂ ಬೆರೆಸಿ ನಿಲೆಯಾಚೆಗೊಂದಾಗಿ ಭಗವಂತ ಗೋಚರಿಪ॥17॥

## ಜಾವಳಿ

**ಅಪ್ಪಾದೊರುಕುಲೋ ನೈತಿನೇ** **ರಾಗ:ಕಾಮಾಚ್, ಮಧ್ಯಾದಿತಾಳ**

ಅಪ್ಪಾದೊರುಕುಲೋ ನೈತಿನೇ। ಚಪಲಚಿತ್ತಮುಚೇತನೇ॥ಪ॥ ಏ ಪಾಪಿ ನಾಪೈ ದೊರೆನುಗಾ॥ ಏ ಪಾಪಮು ಲೇಕ॥ಅ.ಪ.॥ ವೇಡುಕಲ ಜೂಡನೇ। ಈಡು ಚೆಲುಲ ಕೋಡನೇ। ಕೂಡಿ ಆತನಿ ಮೇಡ ಕೇಗಿತೇ। ವಾಡುದಾ ಚೆಲಿಕಾಡನೇ॥ಚ॥

**ಇಂಟಿಕಿ ರಾರಿಚ್ಚಿನಾ? ಯಾಮೇನಿತೊ (ಕ್ಷೇತ್ರಜ್ಞನಪದ)** **ರಾಗ:ಸುರುಟಿ**

ಇಂಟಿಕಿ ರಾರಿಚ್ಚಿನಾ? ಯಾಮೇನಿತೋ - ನಿಂತಿವಾನಿ ದಲಚೇನಾ? ಗೊಂಟುಕಾಡು ಮುವ್ವ ಗೋಪಾಲರಾಯಡು ತಂಟಲು ಚೇಸಿತೇ ದಂಡಿಂಚಕ ವಿಡಿಚಿ ನಾ॥ ಇತನಕಿ ವೆರಚಿನೆ ನಿಕಲಂಚಮಿಚ್ಚೀ ನಾ ಇನ್ನಾಳ್ಳವತಿ ನಸು ಸರಿಂಚಿನಾ। ಬತಿಮಾಲಿ ನೇರಾಯ ಭಾರ ಮಂಪಿಂಚಿನಾ॥ಇಂಟಿಕಿ॥ ಪ್ರೇಮದಲಚಿ ತನ್ನಾ ಮೋಮ್ಮೈನ ಜೂಪೆನಾ। ವಮಿಜೆಪ್ಪಿನ ನಿಜಮಂಚೇನಾ ರಾಮ ಅಯನದೇ ಗಾನ ರಚ್ಚಕು ವೆರಚಿನಾ ಆ ಮಾಟ ಸಭಲೋನೆ ನನಕ ವಿಡೆಚಿನಾ॥ಇಂಟಿಕಿ॥ ಎನಸಿನ ಮಾಕಮಾಟ ಮೆಂತ್ಯೆನ ಜೂಚಿನಾ। ಯೆಂತೋ ವೇಡಿನ ಮನಸಿಚ್ಚೀನಾ। ವನಿತ ಪಟ್ಟಿನ ಪಟ್ಟು ಪಟ್ಟಿದನಿ ಪಿಂಚಿನಾ। ವನಿಬೂನ ಮುವ್ವ ಗೋಪಾಲ ಯನಿ ಪಿಲಿಚಿನಾ॥ಇಂಟಿಕಿ॥

**ಬರಗೊಡುವೆನೇ ನಾ ಅವನ (ಮೇಲಿನ ಕೃತಿಯಕನ್ನಡಭಾವಾನುವಾದ)** **ರಾಗ: ಸುರುಟಿ**

ಬರಗೊಡುವೆನೇ ನಾ-ಅವನ? ಎನ್ನಮನೆಗೆ ಬರಗೊಡೆನೇ ತರಲೆ ಆ ಮುವ್ವ ಗೋಪಾಲರಾಯ ಅಲ್ಲಿ ಗುಲ್ಲೆಬ್ಬಿಸಿದರೆ ಭರದಿ ದಂಡಿಸದೆ ಬಿಡೆನೇ ನೆನೆಯೆ ಅವನ ಮತ್ತೆ॥ ಬೆದರಿ ಅವನಿಗೆ ಲಂಚವೀಯೆನೇ - ನಾ? ಸುದಿನಗಳಲ್ಲೂ ನಾನನುಸರಿಸೇನೇ ಅವನ। ಆ ದೂತಿಯರ ಕಾಡಿ ಬೇಡಿ ರಾಯಭಾರ ಕಳುಹಿಸೆನೇ ಅವಗೆ ಮುದದಿ ಪತಿ ಅವನೆಂದು ಆದರಿಸೆನೇ ಭಕುತಿ ತೋರೆನೇ॥ಬರಗೊಡೆ ನಾ॥ ಒಲವಿಂದ ಮತ್ತೆ ಮೊಗನಿಟ್ಟನೇ ಇನ್ನು ನಾ ಅತಿ ಪಲುಕುವುದೆಲ್ಲಾ ನಿಜವೆಂದು ನಂಬೆನೇ ನಾ ಆ ಕುಲಟೆ ಭಾಮೆಯ ಸೋಗುಸೊಗಸೆ ಅವಗೆ ರಗಳೆ ಮಾಡೆ ನಾ ತಳುಕುರಾಯ ಅವನ್ನ ಪಂಚಾಯತಿ ಮುಂದೆ ನಿಲಿಸೆನೇ ನಾ ॥ಬರಗೊಡೆ॥ ಅಂದು ಪ್ರಿಯಳಾಗಿದ್ದೆ ನಿಜ ಆದರಿಂದು ಸಲ್ಲಾಪಿಸೇ ನಾ ಎಂತೆಷ್ಟು

ಬೇಡಿಕಾಡಿದಲ್ಲೂ ಮನಸ ಅವನೆಡೆಗೊಡೆನೆ ನಾ ಇಂತಿಷ್ಟೂ ನಾ ಹಿಡಿದ ಪಟ್ಟು ಬಿಟ್ಟುಕೊಡೆನೇ ಶಂಕಿಸದಿರು ಗೆಳತಿ ಪಂಥ ಬದಿಗಿರಿಸಿ ಮುದ್ದಿನ ಮುವ್ವಗೋಪಾಲನೆಂದುಮುದ್ದುಗರೆಯೆನೇ ನಾ ।।ಬರಗೊಡೆ।।

**ಇನ್ನಾಳ ವಲೇಗಾದಮ್ಮಾ। ಮುವ್ವಗೋಪಾಲುಡೆನ್ನಿ (ಕ್ಷೇತ್ರಯ್ಯನ ಪದ) ರಾಗ: ತೋಡಿ**

ಇನ್ನಾಳ ವಲೇಗಾದಮ್ಮಾ। ಮುವ್ವಗೋಪಾಲುಡೆನ್ನಿ ನೇರಿಚೆನಾಡಮ್ಮಾ। ನನ್ನು-ಕನ್ನುಲ ಮೂಸಿ - ನಾ ಚೆಂತ ನುಂಡಿನ ಸನ್ನುತಾಂಗಿ-ಮೋವಿ-ಚಾಲ-ಚಪ್ಪರಿಂಚೆನೇ।।ಇನ್ನಾಳ।।ಚರಣ-1।। ಚಲವ ಚಪ್ಪರಮುಲೋ ಸವತಿ ನೇ ನುಂಡಗಾ ಬಲಿಮಿ ನಾದು ಕೊಂಗು ಬಟ್ಟುಕ ಚಾಟುನ ಪಲು ಮಾರು ತೊಡಲಪೈ ಗಿಲಿಗಿಂತ ಲಿಡಗಾನೇ ತೆಲಿಸಿ-ನೇನಡಗಿತೇ-ಕಿಲಕಿಲ ನವ್ವೇನೇ ।।ಇನ್ನಾಳ।।ಚರಣ-2।। ಮಿಸ ಮಿಸಲಾಡು ನಾ ನೊಸಲಿಪೈ-ತಿಲಕಮು ಪೊಸಗದಿದ್ದುಚು ವಾಡು ಬೊಂದುಗಾನಲದಾನಿ ಕುಸುಮಾಸ್ತ್ರ ಗೃಹಮುಪೈ ಕೊಸರಿ ಚೇವೇಯಗಾನೇ ಕೆಸರಿನೇ-ನಡಿಗೀತೇ-ಗಾರಡ ಮಾಡೇನೇ।।ಇನ್ನಾಳ।। ಚರಣ-3।। ಪದರಕ ಮುವ್ವ ಗೋಪಾಲುಡು ನನ್ನಗೂಡಿ ಮದಿರಾಕ್ಷಿರೋ! ದಾನಿ ಮಮತ ದೇಚ್ಚುಕೊನೇನೇ ಕೊದಮ ಗುಬ್ಬಲ ಪೈನಿ ಕೋಕಟು ತೊಲಗಿಂಪ ಕದಸಿ ನೇ ನಡಿಗಿತೇ ತುದ-ನನ್ನಗೂಡನೇ ।।ಇನ್ನಾಳ।। ಚರಣ-4।।

**ಎಂತವನೆಂತವನಮ್ಮಾ(ಮೇಲಿನ ಕೃತಿಯ ಕನ್ನಡ ಭಾವಾನುವಾದ) ರಾಗ: ತೋಡಿ**

ಎಂತವನೆಂತವನಮ್ಮಾ। ಈ ಮುವ್ವ ಗೋಪಾಲಾ? ಎನಿತು ಜಾರ ಚೋರನೇ ಅಂತೆನ್ನ ಕಣ್ಣ ಮುಚ್ಚಿ-ಆ ಸನ್ನುತಾಂಗಿಯ ಮುದ್ದಿಕ್ಕುವನೇ।।ಪಲ್ಲವಿ।। ಚಂದದ ಚಪ್ಪರದಡಿ-ಸವತಿ ನಾನಿರೆ ಪಕ್ಕದಿ ಮುಂದಾನೆ ಎನ್ನದೆಳೆದು-ಅತಿ ಸರಸವಾಡುತಾ ಕೊಂಗನವ ಗಿಲಿಗಿಳ್ಳುತ-ಅವಳ ನಡುವ-ನಲಿವನೇ ಕಂಡದನ-ನಾ-ಖಂಡಿಸೇ-ಕಿಲಕಿಲ ನಕ್ಕು ಅಬ್ಬರಿಸುವನೇ।।ಎಂತಹ।। ಚರಣ-1।। ಮಿರುಮಿರುಗುವ ಎನ್ನೊಸಲೊಳು-ತಿಲಕ-ತಿದ್ದಿ ತೀಡೆಕರನವದೊಂದು ಮರುಕರ ಸರಸವಾಡಿತೇಲಾ-ಆ ಲೋಲೆಯೊಳು ಜರಿದವನ ಧಿಕ್ಕರಿಸೇ ನಾ-ಗಾರುಡಿ ಮಾಡಿ-ಗೆಲ್ವನೇ ನನ್ನ।।ಎಂತಹ।।ಚರಣ-2।। ಸದ್ದಿಲ್ಲದೇ-ಮುವ್ವ ಗೋಪಾಲನೆನ್ನೊಡಗೂಡುವನೇ ಮದಿರಾಕ್ಷಿ ಯವಳ್-ಮಮತೆಯ-ಬಣ್ಣಿಪನೇ ಎದೆ ಹಿಂಡಿ ಬರೆ ಮನದುರಿಯಲಿ-ಸರಿಯೆ ಸೆರಗು ಮುದದಿ ಸಂತೈಸಿದನೇ ಎನ್ನ ಸರಸ ಗೋಪಾಲ।।ಎಂತಹ।।ಚರಣ-3।।

**ಎಟುವಂತಿವಾಡೇ? ವಾಡೇ ಓಯಮ್ಮಾ (ಕ್ಷೇತ್ರಜ್ಞನಪದ)**

ಎಡುವಂತಿವಾಡೇ? ವಾಡೇ ಓಯಮ್ಮಾ ವಾಡೆನ್ನಡು ನೀ ವೀದಿನಿರಾಡು ಕುಟಿಲುಂತಲಿ! ಮುವ್ವ ಗೋಪಾಲುಡಟ ಪೇರು।।ಎ।। ಚರಣ1।। ನಲ್ಲನಿ ಮೇನಿ ವಾಡಟ ಓಯಮ್ಮಾ ವಾಡು ನಯಮುಲೆನ್ನೋ ಚೇಸಿನಂಟ ಚೆಲ್ಲಗಾ ಮಾಟಾಡುನಟ ಸರಸಮು ವಾನಿ ಸೊಮ್ಮಟ ಕಲ್ಲ ಗಾದಟವಾಡು ಕಳಲಂಟ ನೇರ್ಚುನಟ।।ಎ।। ಚರಣ2।। ಬಂಗಾರು ದುಪ್ಪಟ ವಾಡಟ ವಾಡೇಮೇಮೋ ಪಂಥಮುಲಾಡು ಕೊನ್ನಾಡಟ ಅಂಗನಲೆಂದರೈನ ನಲಯಕ ಗೂಡುನಟ ಸಂಗೀತ ಲೋಲುಡಟ ಚಾಲಾ ಈವಿಗಾಡಟ।।ಎಟು।।ಚರಣ 3।। ನನ್ನೇಲೇ ನನ್ನಾಡಟ ಅಂತಲೋನಾದು ಚಿನ್ನೇಲು ದೆಲಿಸಿನಾಡಟ ಮೊನ್ನ ಇಂದು ವಚ್ಚೀನಂಟ ಮುವ್ವಗೋಪಾಲುಡಟ ಚಿನ್ನವಯಸು ವಾಡಟ ಚೆಲುಯ ಅಂದಗಾಡಟ।।ಎಟು।। ಪಲ್ಲವಿ।।

**ಎಂತವನೆಂತವನೇ ಅವ (ಮೇಲಿನ ಕೃತಿಯ ಕನ್ನಡಭಾವಾನುವಾದ) ರಾಗ: ನೀಲಾಂಬರಿ**

ಎಂತವನೆಂತವನೇ ಅವ ಒಯಮ್ಮಾ ಎಂತಾದರೂ ಇ ವೀದಿಯೊಳು ಕಾಲಿರಿಸಿಹನೇನೇ ಏಣಾಕ್ಷಿ ಮುವ್ವಗೋಪಾಲ ನೆನ್ನುವರೇ ಅವನ।।ಚರಣ 1।। ಅವ ಶ್ಯಾಮಲ ವರ್ಣದವನೇ ಓವಯ್ಯಾ ಅವನೇನೇನೋ ಗೈವನಂತೆ ನಯವಿನಯ ವಾಗೇ ಅವ ಸಲ್ಲಾಪಿಸುವನಂತೆ ಇನಿದನಿಗಾಗಿ ಅವಗೆ ಕರಗತವಂತೆ ಸರಸ ಶೃಂಗಾರ ಚೆಲ್ಲಾಟ।। ಎಂತವನೆ।। ಚರಣ 2।। ಬಂಗಾರದೂಕೂಲ ಧರಿಸಿಹನಂತೆ ಏನೇನೋ ಪಂಥ ಹೂಡಿ ಸಾಧಿಸುವನಂತೆ ಅಂಗನೆಯರಸಾಲೇ ಬರಲು

ಸಂತೈಸುತಿ ದಣಿಯಿಲ್ಲೆಂದು॥ಚರಣ 3॥ ನನ್ನೊಡನಾಟ ಅವನಿಗೆ ಬೇಕಿದೆಯಂತೆ। ನನ್ನೊಳ್ ಮನವ ಅವನರಿವನಂತೆ ಮೊನ್ನೆ ಬಂದವ ಮುವ್ವ ಗೋಪಾಲ ಅವನಂತೆ ಚೆನ್ನಪ್ರಾಯದವನೇ ಕೆಳದಿ ಅಂದವನೇ॥ಚರಣ-4॥

**ನಿರುಪಮಾನ** **ರಾಗ: ಬೇಹಾಗ್, ರೂಪಕತಾಳ**

ನಿರುಪಮಾನ ಸಾಮಿನಿನ ನಿಲಯಮುನಕು ರಾ ಮನವೇ॥ಪ॥ ಮರುಪುಲೇಕ ನಾ ಮನವಿನಿ ಮಗುವ ನೀ ತೋ ಮನ್ನಿಂಚುಟಕು॥ಅ.ಪ॥ ಸದಯುಡನಾ ಸಾಮಿಕಿ ಸರಿ ಸಾಟಿಯ ಲೇದನು ಚು ಚಾಲ ಮುದಮು ನೀವ ಮುಖ ವಿಲಾಸ ಮುಗ ಜೂಚಿ ಮುದ್ದಿಂಚುಟಕು॥1॥

**ಮರುಲು ಕೊನ್ನದಿರಾ** **ರಾಗ: ಕಮಾಚ್, ಆದಿತಾಳ**

ಮರುಲು ಕೊನ್ನದಿರಾ ಮಾನಿನಿ ಮಣೀ ನೀಪೈ॥ಪ॥ ಪರಿಪರಿ ವಿದಮುಗ ಪರಿತ ಪಿಂಚುಚು ನೀಪೈ॥ಅ.ಪ॥ ಥರಲೋ ತನಕು ನೀವೇ ತಗಿನ ವಲ್ಲಭುಡನಿ ತರುಣೀ ಮಿಕ್ಕಿಲಿ ನಿನ್ನು ದಲಚಿ ದಲಚಿ ಚಾಲ॥1॥ ಮರಕತಾಂಗಿ ಕೃರುಡೌ ಮರುಪಾರಿ ಕೋರ್ವಕ ಮನಸು ಕರಗಿ ನೀವು ಮದನ ಕೇಳಿಲೋ ಚಾಲ॥2॥ ವನಜನೇತ್ರುಡೌ ಶ್ರೀನಿವಾಸ ನಾಯಕ ನೀದು ವಲ್ಲಗಾನಿ ಮಾಟಲೋ ನೆಲ್ಲಪುದುನು ಪತಿ॥3॥

**ಸಮಯಮಿದಿ ಗಾದುರಾ** **ರಾಗ: ಕಾಪಿ, ದೇಶಾದಿ ತಾಳ**

ಸಮಯಮಿದಿ ಗಾದುರಾ ನಾ ಸಾಮಿ॥ಪ॥ ವಿರಸಮುತೋ ನಾ ಇಂಟಿವರಿಲೋ ನನ್ನುವಿಜಿತಮುಗಾ ಕನುಕೊನ್ನಗುಡಿನ ವೇಳನಾತೋ॥ಅ.ಪ.॥ ನಿಗನಿಗವೆನ್ನಲಾ ಕಾಯುಚುನ್ನದಿ ನಿತ್ಯಮುಗಾ ಇಟುಲ ಜೇಸಿದಿ ನೀಕು। ತಗದುರಾ ಈ ವಿದಿಲೊ ವಚ್ಚುವಾರು ತಾಳನನಿ ನೀಕೇ ಚೆನ್ನನವ್ವಿ ತಿಟ್ಟುದುರಾ ಗನುಕ॥1॥ ಏಕಾಂತಮುಗಾ ಜರಿಗಿನ ಸಂಗತಿ ಎಂತೈನ ಪೈಟಪದೇದಿ ಯಾಯಮಾ ಶ್ರೀಕಾಂತ ನೀಕೇಲ ಇಂತ ದೂರಮು ಶ್ರೀನಿವಾಸಾರ್ಚಿತ ಭಾವಿನೀಳ್ಳು ಪೊಳ್ಳಿ ಕೊನ್ನದಿರಾ॥2॥

**ಸಮಯಮಿದೇ ರಾರಾ** **ರಾಗ: ಬೇಹಾಗ್, ರೂಪಕತಾಳ**

ಸಮಯಮಿದೇ ರಾರಾ ನಾ ಸಾಮಿತಾಮ ನಿಂಚಕುರಾ॥ಪ॥ ಕಮಲವೈರಿಜಿನುದೆಂಚಿನ। ಕಾಂಕ್ಷಲೀಡೇರ ದೊರ॥ಅ.ಪ.॥ ಮಗಡು ಉರಲೇಡು। ಮಾಮಗಾರಿ ಜೋಲಿಲೆದ ನಿಂ। ವಗಕೆಗ ತಲಸಿನ ದೀಗಾ। ವಟ್ಟಿಪರಿತಮೇಲರಾ॥ಚ॥

## ತಿಲ್ಲಾನ

**ತನದಿರನ ಧೀಂ ತನಧೀಂ** **ರಾಗ: ಕಾಪಿ, ಛಾಪುತಾಳ**

ತನದಿರನ ಧೀಂ ತನಧೀಂ ಧೀಂ। ಧಿತ್ತಾರಿ ತಕಝುಂ ತರಿಧಣಂ ತನದಿರನ ಧೀಂತನ ಧೀಂ ತನಧಿಂ ತಕಧೀಂ। ಕಿಟಧೀಂ ತದರದನಿ ತೊಂತನ ದಿರನ ಧೀಂ ತನಧೀಂ ತನಧೀಂ ತಕಧೀಂ। ಕಿಟಧೀಂ ತೋಂ ತದರದನಿ ತೋಂತನ॥ಪ॥ ತಾಕಿಟ ತಾ ತದ್ಧೀಕಿಟತಕ ಝುಣುತರಿ ಕಿಟ ತಾಂ। ದಿರಿದಿರಿ ನಾದಿರಿ ದಿರಿ ತೋಂ ದಿರಿದಿರಿ ದಿರಿ ಧಿತ್ತಳಾಂಗು ತಕುಂಧರಿಕಿಟತಾಂ ತಕತಿಲ್ಲಿಲ್ಲಾನ। ತಿಲ್ಲಿಲ್ಲಾನ ತಿಲ್ಲಾನ। ದಿರಿದಿರಿ ಧಾತ್ರಿ ಝುಂತರಿಕಿಟತಕ ತಕಧಿಗಿ ತದಿಗಿಣತೋಂ॥ಅ॥ ಸರಸ ನಿನು ನಂಮ್ಮಿತಿ ರಾ। ಸ್ಮರುನಿ ಶರಚಾಪಮು ದೀರ್ಚರಾ ಹರುಷಮುಗ ನನ್ನು ಚೂಡರಾ। ಕರುಣನಿಧಿ ಚಾಮರಾಜೇಂದ್ರ ತಧಿಗಿಣ ತೋಂ। ಧೀಗಿಣತೋಂ ಗಿಣತೋಂತಾ ಧಾರಿತ್ತ, ಧರಿಕಿಟ ತಳಾಂಗು ತಕಣಕತಾಂ। ನಿದನಿಪ ಮಗರಿಸ ನಿಸರಿಮಪನಿ ಸನಿಧನಿ॥

**ದಿರನಾ ತನಧೀಂತ ದಿರನಾ** **ರಾಗ: ಜುಂಜೋಟಿ, ಆದಿತಾಳ**

ದಿರನಾ ತನಧೀಂತ ದಿರನಾ।।3ಬಾರಿ।। ನಾದಿರಿದಿರಿದಾ ನಿತೊಂ ದಿರಿದಿರಿದಾನಿ। ತನೋಂತನನ ದಿರನಾ ತನಧೀಂತ ಧಿರನಾ ದಿರನಾ ತನಧೀಂತ ದಿರನಾ।।ಪ।। ತಾಕಿಟ ಕಿಟತೋಂ ತಧಿ ಕಿಟತೋಂ। ಕಿಟತೋಂ ತಕುಂಧರಿ।। ಕಿಟತಕ ತದ್ಧಿಂ। ತಕಧೀಂ।। ಝುಣುತಕಧೀಂ ತಕಝುಣುತಕಧೀಂ ಕಿಟಧಿಂ, ತಾರಿತ್ತ ತ್ತಧಿಗಿಣತೋಂ।। ತಕತಳಾಂಗುತಕ। ನಂತರಿ ತಂಝುಣ। ತಕತಿಲಾನ ತದರದಾನಿ ಧಿತ್ತಿಲಾನದಿರಿ ನಾದಿರಿ। ಧಿಮಿತ ಕಿಟತ ಧಣತ ಝುಣತ।।ಅ.ಪ.।। ಎನ್ನಿ ವಿಧಮುಗಾ ವೇಡುಕೊಂದು। ರಾ ಇಕತಾಳ ಜಾಲನುರಾ। ದಯಯುಂಚರಾ...... ನಿನ್ನೇನಮ್ಮಿನಾನು। ರಾ ವಿನರ ಸುಗುಣಸಾಂದ್ರ। ಶ್ರೀ ಚಾಮರಾಜೇಂದ್ರ ಧಿತ್ತಳಾಂಗು ತಕ ತಳಾಂಗು ತಕಧಿತ್ತಳಾಂಗು ಮಧಪಮಗಮ ಧಿತ್ತಿಲ್ಲಾನ।।ಚ।।

**ಧೀಂತಧುನಿಕುತಕ ಧೀಂನ** **ರಾಗ: ಧನಸಾರಿ, ಆದಿತಾಳ, ಸ್ವಾತಿತಿರುನಾಳ್**

ಧೀಂತಧುನಿಕುತಕ। ಧೀಂನ ಘ್ರತತೋಂ। ನಾಚ್ ರಹೆ ಗೋರಿ। ತಾಧಿತ್ತೈ ತ್ತೈ ಧಿ ತ್ತೈ ಧಿರತಕೋಂ।।ಪ।। ಬಾಚ್ ಪಾಯಲಕಹೋ ಝುನನ ಝುನನ।। ಬಾಚ್ ಪಾಯಲಕಹೋ ಝುನನ ಝುನನ। ತೋಂಝುನನ ಝುನನ ಝುನನ ಝುನನ। ತೋಂ ಝುನನ ಝುನನ ಝುನನ ಝುನನ।। ತಾನಗಾವೇ। ತಕತ ಥೈತಥೈ।। ಥೈತ ಥೈತ ತಕತನಾಂ ಧೀಂನಕಿಟ ತಕಧೀಂ ಧೀಂನಕಿಟ ತಕಧೀಂ ಧೀಂನಕಿಟ ತಕಧೀಂ। ಹತತೋಂ ಹತತೋಂ ಹತ।।ಧೀಂ।। ಪದುಮನಾಭ ತುಮ್ಹಾರೀ ಲೀಲ।। ಕ್ಯಾಕಹೂಂಮ್ಯೆ। ಸಾವರೋ।। ತಾಪ ಸಂಕಟ। ಶರಣ ಆಯೋ। ಸೋ ಹಮಾರೋ ತುಮಹರೋ। ತಧೀಂ ತಧೀಂ ದಿರನಾ ಉದನಿತ ದಾನಿದಾನಿ ತಧೀಂ ತಧೀಂ ದಿರನಾ। ನಾಧಿತ್ತೋಂ ತಕಧರನರ ತದಾರ ದರತಾನಿಧಾಂ। ಅಲರಿ ಘಲರಿ ತಕ ತದಾ ದಾ ದಾರ ತಧಿಕ ತಾತಾತಾ ನಿತಕ। ತಮಾಂತಾನಿ ಧೀಂ ಧೀಂ ಧೀಂ ತನಿ ಅಲರಿ ತಾಂತಾಂ ತಾಂ ತಕತನಿ। ಅಲರಿ ಥೋಂ ಥೋಂ ಥೋಂ ತಕ ಧಿಗುತನಿ ಅಲರಿ।।ಧೀಂ।।

**ನಾದಿರಿ ದಿರಿತೊಂ ತದಿರನಾ** **ರಾಗ: ಬೇಹಾಗ್, ಆದಿತಾಳ**

ನಾದಿರಿ ದಿರಿತೊಂ ತದಿರನಾ ತದರದನಿ ನಾದಿರಿದಿರಿ ತೊಂತದಿರ ನತದರದನಿ।। ತನ ನಾದಿರಿನಾ ಧುಮುಕಿಟತಕ ತಧಿಗಿಣತೊಂ ಕಿಟತೊಂ ತೊಧಿಗಿ ತಾತಾ ಧಿಗಿತೊಂ ಧಿಗಿಧಿಧಿತ್ಲಾಂಗು ತಕಝುಣುತಕ ತದನಿ। ರಾಜ ಮಹರಾಜಾ ಸದ್ವಿದ್ವಜ್ಜನುಲ ಭೋಜ ರವಿಕೋಟಿತೇಜ ಶ್ರೀ ಚಾಮರಾಜ ಸುಕುಮಾರ ಕೃಷ್ಣರಾಜ ಚಿರಾಯು ತಕತಳಾಂಗು ತಕಣಕಝುಂ ತಧಿಕಿಟ। ಗಮಗರಿಸನಿ ರಿಸ ನಿದ ಪಮಗರಿಸನಿ।।ಚ।।

**ನಾದಿರಿ ಧಿರಿಧೀಂ ಧೀಂತಾ** **ರಾಗ: ತೋಡಿ, ಆದಿತಾಳ**

ನಾದಿರಿ ಧಿರಿಧೀಂ। ಧೀಂತ ತನದಿರಿ।। ತದರದಾನಿ ನಾದಿರಿ ಧಿರಿಧೀಂ ತನನ।। ನಾದಿರಿದಾನಿ ತೊಂದಿರಿದಾನಿ। ತನೋಂತ। ನದಿರನ।। ಉದರದಾನಿ ದಿರಿದಿರಿ। ಧೀಂ.....। ತನನಂ।। ಝುಂತರಿ ಕಿಟತಕ ಣಂತರಿ ಕಿಟತಕ। ತಕಣಕ ತಕಝುಣು ತಕಧಿಮಿ ಕಿಟತಕ।। ಗರೀನಿದನಿ ಮಗಾರಿಸರಿ। ಪಾದನಿ।।1।। ವಿತರಣ ಗುಣ ಶೀ। ಲ ಸುಪಂಡಿತ ಗಾ।। ಯಕ ಸಮಾಜ ಕವಿ। ಜನಾಪ್ತ। ಸುಹೃದಯ।। ವಿಜಯ ಶ್ರೀ ಚಾ। ಮರಾ। ಜೇಂದ್ರ।। ಶ್ರಿತಜನಾಧಾರ।। ಸುಕುಮಾ।। ರ। ಝುಂತರಿ ಕಿಟತಕ। ಣಂತರಿ ಕಿಟತಕ। ತಕಣಕ ತಕಝುಣು ತಕಧಿಮಿ ಕಿಟತಕ।। ಗರೀನಿದನಿ ಮಗಾರಿಸರಿ ಪಾದನಿ।।ಚರಣ।।

## ಸಾಮಾನ್ಯ

**ಎಂಥ ಭಕ್ತಿಯು ನಿನ್ನದು (ಭಕ್ತಿಗೀತೆ)** **ರಾಗ: ತಿಲಂಗ್**

ಎಂಥ ಭಕ್ತಿಯು ನಿನ್ನದು ಹೇ ಮನುಜ ಎಂಥ ಪೂಜೆಯು ನಿನ್ನದು।।ಪ।। ದೇವರು ದೇವರು ಎನ್ನುವರೆಲ್ಲ ದೇವರ ಪೂಜೆ ಮಾಡುವರೆಲ್ಲ। ನಿಜವಾದ ದೇವರು ಬಂದರೆ ಅರಿಯಲು ನೀವು ಹೋಗುವರಲ್ಲ।।1।। ಗಣಪ ಗಣಪ ಎನ್ನುವರೆಲ್ಲ

ಗಣಪನ ಪೂಜೆ ಮಾಡುವರೆಲ್ಲ। ನಿಜವಾದ ಗಣಪ ಬಂದರೆ ಆನೆ ಬಂತೆಂದು ಹೇಳುವರೆಲ್ಲ॥2॥ ಹನುಮ ಹನುಮ ಎನ್ನುವರೆಲ್ಲ, ಹನುಮನ ಪೂಜೆ ಮಾಡುವರೆಲ್ಲ। ನಿಜವಾದ ಹನುಮ ಬಂದರೆ, ಕೋತಿ ಬಂತೆಂದು ಹೇಳುವರೆಲ್ಲ॥3॥ ನಾಗ ನಾಗ ಎನ್ನುವರೆಲ್ಲ ನಾಗನ ಪೂಜೆ ಮಾಡುವರೆಲ್ಲ। ನಿಜವಾದ ನಾಗ ಬಂದರೆ ಹಾವು ಬಂತೆಂದು ಹೇಳುವರೆಲ್ಲ॥4॥

### ಏಳು ಕೊಳ್ಳದಲ್ಲಿ ಇರುವ (ಯೋಗದ ಹಾಡು) ರಾಗ: ಮೋಹನ

ಏಳು ಕೊಳ್ಳದಲ್ಲಿ ಇರುವ ಏಳು ಮುಖದವ। ಏಳು ಮೇಲೆ ಏಳು ಮೇಲೆ ಕರದ ಪರಶಿವ॥ಪ॥ ಪಂಚ ಮಹಾ ಭೂತಗಳ ಪಂಚೀಕರಣ। ಸಂಚರಿಸಿ ಬಂತು ಧರೆಗೆ ನೀನೆ ಕಾರಣ। ಎಂಬತ್ತುನಾಲ್ಕು ಲಕ್ಷ ಜೀವ ರಾಶಿಗೆ ತುಂಬಿದೆದೆಯ ತಾಯಿ ಎಂಬ ಹೆಸರು ಗಳಿಸಿದೆ॥1॥ ಗುಪ್ತನಾಳದಿಂದ ಹಿಡಿದು ಶೂನ್ಯದ ಹಾದಿ। ಸಪ್ತ ಸಿದ್ಧಿಗಳನ್ನು ಪಡೆದು ಸೇರಿ ಸಮಾಧಿ। ಎಲ್ಲ ತತ್ವಗಳನ್ನು ಬೆರಸಿ ಹಾಕಿ ಬುನಾದಿ। ಬಲ್ಲ ಮೂಲದಿಂದ ತಿಳಿದೆ ನೀನೆ ಅನಾದಿ॥2॥ ಗಾಳಿ ನುಂಗಿ ನುಂಗಿ ನಿನ್ನ ನೋಡಿದನುಭವ। ಯೋಗಿ ಜನ್ಮ ಜನ್ಮದಿಂದ ಬಂತು ಶಿವಶಿವ। ಬಂಧ ಮಹಾ ಬಂಧದಿಂದ ನಿನಗೆ ಬಿಡುಗಡೆ। ಕಂದ ಮೂಲದಿಂದ ಬ್ರಹ್ಮ ರಂಧ್ರಕ್ಕೆನಡೆ॥3॥

### ಕನಕಾಲಂದಿಗೆ ಗೆಜ್ಜೆ ಝಣಿಝಣೀರೆನುತಾ ರಾಗ: ಸಿಂಧೂರಭೈರವಿ

ಕನಕಾಲಂದಿಗೆ ಗೆಜ್ಜೆ ಝಣಿಝಣೀರೆನುತಾ। ಘಿಲುಕು ಘಿಲುಕೂ ಘಿಲ್। ತಂಗಡ್ ತಾತಾರೆನುತಾ। ತಂಗಡ್ ತಾತಾರೆನುತಾ। ತಾಧೀಮಿರೆನುತಾ। ತಾಧೀಮಿರೆನುತಾ॥ ಜಾಣಬಂದ ಮನೀಗೇ। ಜಾಣಬಂದ ಮನೀಗೆ॥ಪ॥ ರಮಣೀಯ ಧ್ವನೀಗೆ। ರಮಣೀಯ ಧ್ವನಿ ಕೇಳಿ। ಸ್ವಾಮಿ ಬಂದ ಮನೀಗೆ। ಸ್ವಾಮೀ ಬಂದ ಮನೀಗೇ॥ ಗೋವಿಂದ ಬಂದ ದೇವರೂಳಾವೀಗೆ॥ಅ.ಪ॥ ನಾರದರು ತುಂಬುರರು ವೀಣೆ ಬಾರಿಸಲು। ವೀಣೆ ಬಾರಿಸಲು। ಧೀಂ ಧೀಮಿ ಧಿಮಿ ತಕ್ಕ। ತಂಗಡ್ ತಾತಾರೆನುತಾ। ತಂಗಡ್ ತಾತಾರೆನುತಾ। ತಾಧಿಮಿರೆ ತಾಧೀಮಿರೆನುತಾ॥ ಅಚ್ಚುತ ಬಂದ ದೇವರೊಳವೀಗೆ॥1॥ ಜಂಬೂ ಬಾರಿಸುವಂತ ಸಂಭ್ರಮದ ಮೃದಂಗ। ಸಂಭ್ರಮದ ಮೃದಂಗ। ಥಾ ಧಿಮಿ ತಕ್ಕ ಧೀಮಿ। ತಂಗಡ್ ತಾತಾರೆನುತಾ। ತಂಗಡ್ ತಾತಾರೆನುತಾ। ತಾ ಧೀಮಿರೆನುತಾ। ತಾಧೀಮಿರೆನುತಾ॥ ಅಚ್ಚುತ ಬಂದ ದೇವರೊಳವೀಗೆ॥2॥

### ಕಸಬರಿಗೆ ಬಾರೆ ಕಸ ಬರಿಗೆ (ಕಸಬರಿಗೆ)

ಕಸಬರಿಗೆ ಬಾರೆ ಕಸ ಬರಿಗೆ ಹಸನ ಮಾಡುವಂಥ। ಹರನು ಕಳಿಸಿದ॥ಪ॥ ಹುಲ್ಲು ಜನುಮದಲಿ ಹುಟ್ಟಿದ ಬರಿಗೆ ಬಿಲ್ಲಿ ದುಗ್ಗಾಣಿ ಕಿಮ್ಮತ್ತಿನ ಬರಿಗೆ। ಒಳ್ಳೆ ಮಡಿಯೆ ಮಡಿವಂತಿಕೆಯ ಬರಿಗೆ ಎಲ್ಲರ ಸೇವಕಳಾಗಿಹ ಬರಿಗೆ॥1॥ ನಿತ್ಯುಪಕಾರವ ನೀಡುವ ಬರಿಗೆ। ಪ್ರತ್ಯುಪಕಾರವ ಬೇಡದ ಬರಿಗೆ। ಸಾರ್ಥಕವಾಯ್ತು ಜನ್ಮಿಸಿದಕೆ ಬರಿಗೆ। ಸ್ವಾರ್ಥಾಭಿಮಾನದ ತ್ಯಾಗಿನಿ ಬರಿಗೆ॥2॥ ಹಿಡಿ ಎಂಬ ಹೆಸರಿನ ಕೊಡುಗೈಯ ಬರಿಗೆ। ಗುಡಿ ಮಠ ಮನೆ ಮಾರು ಉಡುಗುವ ಬರಿಗೆ। ಬಡವ ಬಲ್ಲಿದರಿಗೆ ಬೇಕಾದ ಬರಿಗೆ। ಒಡೆಯ ಶ್ರೀ ಪ್ರತಿಭಾಂಕುರನ ಪ್ರಿಯ ಬರಿಗೆ॥3॥

### ಕಂಚು ಭಾರ ಕಳಶ ಭಾರಾ ರಾಗ: ಆಂದೋಳಿಕ

ಕಂಚು ಭಾರ ಕಳಶ ಭಾರಾ। ಮಂಚ ಭಾರಾ ಮಡದಿ ಭಾರಾ। ಅಂತಜನಕಿನ್ನೆಂಥ ಚೆಲುವಿ। ಸಂತ ಸಖುಬಾಯಿ ನೀನೆ ಬಾರಾ। ಸುಂದರಾಂಗನ ಬಳಿಗೆ ಬಾರೆಂದ - ರುಕ್ಮಿಣಿದೇವಿ। ಸುಂದರಾಂಗನ ಬಳಿಗೆ ನೀ ಬಾರಾ॥1॥ ವಾರೀಲೆ ವಂಕಿ ಭಾರಾ ತೋಳ ಭಾರ ಮುರುಗಿ ಬಾರಾ। ನಿನ್ನ ಹೆಸರ ಹೆಂಗೆ ಕರೀಲಿ ಬಂಗಾರದವಳ ನೀನೆ ಭಾರಾ ಸುಂದರಾಂಗನ ಬಳಿಗೆ ಬಾರೆಂದ-ರುಕ್ಮಿಣಿದೇವಿ। ಸುಂದರಾಂಗನ ಬಳಿಗೆ ನೀ ಭಾರಾ॥2॥ ಹತ್ತ ತೊಲಿಯ ಬಳೆಯ ಬಾರ ಮುತ್ತಿನ ಹಂಡಿ ಹಣೆಗೆ ಭಾರಾ। ಮೂರಾಮಾಸಿ ಕತ್ತರಿ ಬಾವಲಿ ಮುರಕ ಮಾಡ ಭೈರಿ ಭಾರಾ। ಸುಂದರಾಂಗನ ಬಳಿಗೆ ಬಾರೆಂದ -

ರುಕ್ಮಿಣಿದೇವಿ। ಸುಂದರಾಂಗನ ಬಳಿಗೆ ನೀ ಬಾರಾ॥3॥ ಆರು ತೊಲೆಯ ಬಳಿಯೆ ಭಾರಾ। ಕಾಲ ಕಡಗ ಪೈಜಣ ಭಾರಾ। ಅತ್ತೆಮಾವ ಮಾಡಿಸಿದಂಥ ಗೆಜ್ಜೆ ಡಾಬ ನಡಗಿ ಭಾರಾ। ಸುಂದರಾಂಗನ ಬಳಿಗೆ ಬಾರೆಂದ - ರುಕ್ಮಿಣಿದೇವಿ ಸುಂದರಾಂಗನ ಬಳಿಗೆ ನೀ ಬಾರಾ॥4॥

### ಗೋಪುರದ್ವಾರದ ರಜವನ್ನೇ ಹೊಡೆವೆ ರಾಗ: ನೀಲಾಂಬರಿ

ಗೋಪುರದ್ವಾರದ ರಜವನ್ನೇ ಹೊಡೆವೆ ಪ್ರಾಕಾರವಾದ ಮಂಟಪವನ್ನೇ ತೊಡೆವೆ। ಶ್ರೀಕಾರಕ್ಕೆ ಪದ್ಮಂಗಳನಿಡುವೆ। ಶೃಂಗಾರದ ಶಂಖಚಕ್ರಗಳ ತುಂಬಿಸುವೆ॥1॥ ಕಡೆಯ ಬಾಗಿಲ ಕಾಯ್ವೆ। ಶಂಕರನ ಎನ್ನೊಡೆಯ ಅರ್ಕೇಶ್ವರನ ಲಿಂಗಾನಾಲಯಿಸೆ॥2॥ ಹರಿವಾಣ ಬಟ್ಟಲ ತೊಳೆದು ತಂದಿಡುವೆ। ಹರುಷದಿಂದ ದೋದಕನ ತುಂಬಿಸುವೆ। ಪರಿಪರಿಯ ಪುಷ್ಪ ವೀಳ್ಯ ಧೂಪಗಳನ್ನಿಡುವೆ। ದೀಪಗಳ ಹತ್ತಿಸಿ ನೈವೇದ್ಯಕ್ಕೀಡುವೆ॥3॥ ಹಸ್ತೋದಕ ವಸ್ತ್ರ ದರ್ಪಣವಿರಿಸಿ ಛತ್ರಿ ಛಾಮರ ವಾದ್ಯಗಳಿಂದ ಸ್ತುತಿಸಿ ವಾದ್ಯನರ್ತನಗೀತಗಳಿಂದ ಸ್ತುತಿಸಿ ಆನಂದದಿ ಶುದ್ಧೋಕವ ತುಂಬಿಸುವೆ॥4॥ ತಾಂಬೂಲದ ಮುಡುಪುಗಳ ತಂದಿಡುವೆ। ನಡುವೆ ಮಂಗಳಾರುತಿಯ ಹಚ್ಚಿ ಬೆಳಗಿಸುವೆ। ಬಂದು ಪ್ರದಕ್ಷಿಣೆ ಮಾಡಿ ನಮಸ್ಕರಿಸುವೆ॥5॥ ಪಾರ್ಥನ್ನ ನಿಜವನ್ನೇ ನೋಡುಬೇಕೆನುತ ಕಿರಾತವೇಶದಿ ಶಿವತಾನೆ ಬಂದು ಲೋಕಗ್ಗಳೆಯನೆಂಬೋ ಹಾಸ ತಾನಾಗಿ ದತ್ತಾತ್ರೆಯ ಗುರು ರೂಪ ತಾನಾಗಿ॥6॥

### ಚೆನ್ನಪ್ಪ ಚೆನ್ನೇಗೌಡ (ತತ್ವಪದ) ರಾಗ: ಖರಹರಪ್ರಿಯ

ಚೆನ್ನಪ್ಪ ಚೆನ್ನೇಗೌಡ ಕುಂಬಾರ ಮಾಡಿದ ಕೊಡನವ್ವ। ಚೆಂದಕೆ ತಂದೇನಾ ತಂಗಿ ನೀರಿಗೆ ಬಂದೇನಾ॥ಪ॥ ಆರು ಮೂರು ಒಂಭತ್ತು ಒಂಭತ್ತು ತೂತಿನ ಕೊಡನವ್ವಾ। ಚೆಂದಕೆ ತಂದೇನಾ ತಂಗಿ ನೀರಿಗೆ ಬಂದೇನಾ॥1॥ ಬಾಳೆಯ ಬನದಾಗ ನಾಬಾಗಿ ಹೆಂಗೆ ಬರಲವ್ವಾ। ಚೆಂದಕೆ ತಂದೇನಾ। ತಂಗಿ ನೀರಿಗೆ ಬಂದೇನಾ॥2॥ ಲಿಂಬಿಯ ಬನದಾಗ ನಾಹೆಂಗ ನಂಬಿ ಬರಲವ್ವಾ। ಚೆಂದಕೆ ತಂದೇನಾ ತಂಗಿ ನೀರಿಗೆ ಬಂದೇನಾ॥3॥ ದ್ಯಾಮವ್ವನ ಗುಡಿಮುಂದ ಒಬ್ಬ ಮುದುಕ ಕುಂತಿದ್ದಾ। ಗಾಂಜಾ ಸೇದುತಿದ್ದಾ ಪಟಕಾ ಸುತ್ತಿದ್ದಾ। ಹುಯಿಲಗೋಳ ಕೆರಿಯಾಗ ನೀರು ತರುವಾಗ। ಕಲ್ಲ ತಾಕಿತ ತಂಗಿ ಕೊಡವು ಒಡೆಯಿತ॥ ಯವ್ವ ಇವನ್ಯಾರ ಮಂಚದ ಮ್ಯಾಲ ಮಲಗ್ಯಾನ। ಗೊತ್ತಿಲ್ಲೇನವ್ವ ತಂಗಿ ಶಿಶುನಾಳಷರೀಫಜ್ಜ। ಚೆಂದಕ ತಂದೇನೇ ತಂಗಿ ನೀರಿಗೆ ಬಂದೇನೇ॥

### ತಿಳಿ ನೀ ಹಪ್ಪಳ ಮಾಡುವುದು ರಾಗ: ವಸಂತಭೈರವಿ

ತಿಳಿ ನೀ ಹಪ್ಪಳ ಮಾಡುವುದು। ಸುಖಿಸೋ ಸವಿದು ಅದರ ಹದ॥ಪ॥ ತನುವು ನೆಂದು ಬೆಳೆದ ಅಹಂಮಿನ ಹುರಳಿಯ ಕಾಳನು ಸುಲಿಯೋ ನಾನಾನೆನ್ನುವ ಆತ್ಮ ವಿಚಾರದ। ಬೀಸುವ ಕಲ್ಲೊಳು ನುರಿಸೋ॥ಅ.ಪ॥ ಸಜ್ಜನ ಸಂಗಡ ನಿಂಬೆಯ ರಸವು ನಿಗ್ರಹ ಜೀರಿಗೆ ಮೆಣಸು। ನಿಸ್ಸಂಗದ ಲವಣದ ಜೊತೆ ಧಾನ್ಯದ ಇಂಗಿನ ಪರಿಮಳ ಬೆರೆಸು॥1॥ ಸೇರಿಸಿ ನಾದಿದ ಹಿಟ್ಟನು ಇದು ನೀ ಹೃದಯದ ಒರಳಿನೋಳ್‌ತೊಳಸಿ। ಮನಸಿನ ಹಾರೆಯ ಎತ್ತಿ ಕುಟ್ಟು ನೀ ಆತ್ಮ ವಿಚಾರದ ಬಂಧಿಸಿ॥2॥ ಜೀವನವೆನ್ನುವ ಒತ್ತೋ ಮಣೆಯಲಿ ಅದರ ಆಕೃತಿಯ ಬೆಳಸು। ಬ್ರಹ್ಮ ಚಿಂತನೆಯ ತುಪ್ಪವು ತುಂಬಿದ ಮೌನದ ಬಾಣಲೆಗಿರಿಸು॥3॥ ಜ್ಞಾನದ ಉರಿಯನು ಎಬ್ಬಿಸಿ ಕರಿಯೋ ಬದಲಿಗೆ ಹಪ್ಪಳವೆ ಸವಿದು। ಚಪ್ಪರಿಸಿ ನೋಡೋ ಅಡಗಿದೆ ಮಾಯೆಯ ಸಪ್ಪಳವೆ॥4॥

### ಬರ್‍ತೀರಾ ಇಲ್ಲೆ ಇರ್‍ತೀರಾ (ತತ್ವಪದ) ರಾಗ: ಶ್ರೀ

ಬರ್‍ತೀರಾ ಇಲ್ಲೆ ಇರ್‍ತೀರಾ ನೀವು। ಬರ್‍ತೀರಾ ಇಲ್ಲೇ ಇರ್‍ತೀರಾ.....। ಧರೆಯಾ ಭೋಗವ ನೀಗಿ। ವರಮೋಕ್ಷ ಪಡೆಯಲು॥ಪ॥ ಅಕ್ಕರದಿ ಸತಿ ಸುತರು ಅಣ್ಣತಮ್ಮರ ಬಿಟ್ಟು। ಸಕ್ಕರಿ ಎರಸೀದ ಸವಿಯೂಟವ ಬಿಟ್ಟು। ತೆಕ್ಕೇ ಗಾದಿಯ

ಬಿಟ್ಟು ಸೊಕ್ಕಿ ಸಡಗರ ಬಿಟ್ಟು। ರೊಕ್ಕಾದ ತಿಜರೀಯ ಕೀಲಿಕೈಯ್ಯನು ಬಿಟ್ಟು॥1॥ ತಂಟೆ ತಗಲವ ಮಾಡಿ ಗಳಿಸಿದ ಹೊಲಮನಿ। ಎಂಟು ಎತ್ತಿನ ಕಮತ ಎಲ್ಲಾ ವಾಂಚಲ್ಯ ಬಿಟ್ಟು। ನೆಂಟರೂ ಭಂಟರುಗಳ ಕೂಡ ಗುರ್ರ್ಯಾಡಿ। ಗಂಟಲ ಹರಕ್ಕೊಂಡು ಗಳಿಕೆ ಮಾಡೋದ ಬಿಟ್ಟು॥2॥ ಅಷ್ಟವೈಭವ ಬಿಟ್ಟು ಅಧಿಕಾರ ಮದಬಿಟ್ಟು। ಮಷ್ಟದಿ ಅವ ಬಿಟ್ಟು ಇಷ್ಟ ಮಿತ್ರರ ಬಿಟ್ಟು। ಕಟ್ಟಿದಾ ಕಲ್ಲಿನ ಕಂಭ ಕಟ್ಟಿದ ಮನೆ ಬಿಟ್ಟು। ಕುಟಿಲಾ ಸಂಸಾರದ ಕಿಟಕಿಟಿಯನು ಬಿಟ್ಟು॥3॥ ನೇಮಾ ನಿತ್ಯವ ಬಿಟ್ಟು ರಾಮಾ ಕಾರ್ಯವ ಬಿಟ್ಟು। ತಾಮಸ ಗುಣ ಬಿಟ್ಟು ಹೋಮ ಹವನ ಬಿಟ್ಟು। ಸ್ವಾಮಿಯ ಪುಣ್ಣಿಯ ನಾಮ ನಿನ್ನಯ ಪಾದ। ನೇಮದಿ ಭಜಿಸಲು ಪ್ರೇಮದಿಂದಲಿ ನೀವು॥4॥

## ಬಾಯಲ್ಲಿ ತಿನ್ನೋದು ಬೆನ್ನಲ್ಲಿ (ಒಗಟು)

ಬಾಯಲ್ಲಿ ತಿನ್ನೋದು ಬೆನ್ನಲ್ಲಿ ಉಗುಳೋದು। ನಾಗಕರ್ಣಿಕೆಯರ ನಗಿಸಿ ಮಾತಾಡ್ನೋದು। ಬಾಲೆ ರಾಗಿಯ ಕಲ್ಲಲ್ಲವೇ॥1॥ ನೀರಲ್ಲಿ ಹುಟ್ಟೋದು ನೀರಲ್ಲಿ ಬೆಳೆಯೋದು ಊರ ಮುಂದೆ ಕೂಗಿದರೆ ಊರೊಳಗೆ ಕೇಳಿಸೋದು ಶಂಖದ ಧ್ವನಿಯಲ್ಲವೇ॥2॥ ಓಣಿಲಿ ಹುಟ್ಟೋದು ಓಣಿಲೀ ಬೆಳೆಯೋದು। ಕಾಯಿ ಮುಚ್ಚಿ ಹೂವಾಗಿ ಬಳ್ಳಿ ಮಾತ್ನಾಡೋದು। ಸೋರೆಕಾಯಲ್ಲವೇ॥3॥ ಹಾದೀಲಿ ಹುಟ್ಟೋದು ಹಾದೀಲಿ ಬೆಳೆಯೋದು ಹೋಗುವ ಅಣ್ಣಯ್ಯನ ಸೆರಗ್ಹಿಡಿದು ನಿಲಿಸೋದು ಉತ್ತರಣಿ ಕಡ್ಡಿಯಲ್ಲವೇ॥4॥ ಕಲ್ಲಲ್ಲಿ ಹುಟ್ಟೋದು ಕಲಲ್ಲಿ ಬೆಳೆವೋದು। ಕಲ್ಲಲ್ಲಿ ಇರುವೋ ಇಂಥಾ ಬೆಡಗು ಮಾಕಳಿ ಬೇರಲ್ಲವೇ॥5॥ ನಾಕುಕಾಲಲ್ಲಿ ಹುಟ್ಟೋದು ಮಂಟಪವ ರಚಿಸೋದು। ರಂಗವಿಠಲನ್ನ ನಗಿಸಿ ಮಾತಾಡ್ಡೋದು ರಾಗಿಯ ತೆನೆಯಲ್ಲವೇ॥6॥ ಎಂಟು ಕಾಲಲ್ಹುಟ್ಟೋದು ಮಂಟಪವ ರಚಿಸೋದು। ರಂಗ ಜೋಳದ ತೆನೆಯಲ್ಲವೇನೇ॥7॥ ಅಂಗಳದಲ್ಹುಟ್ಟೋದು ಅಂಗಳದಲ್ಲಿರುವೋದು। ತಂಗೀರ ಮಕ್ಕಳ ಆಟಕ್ಕೆ ಕರೆವೋದು ಕೋಳಿಯಮರಿಯಲ್ಲವೇನೇ॥8॥ ಕಂಬಕ್ಕೆ ಹುರಿಕಟ್ಟಿ ಗುಂಬಕ್ಕೆ ಗುರಿಕಟ್ಟಿನಾಲಕ್ಕು ಬೀದಿಯ ಪರಿಶೇಷ ತಿರುಗೋದು ಬೇಲೂರ ತೇರಲ್ಲವೇ॥6॥

## ಬೇಕೆನಗೆ ಸುಖಶಾಂತಿ ಬೇಕೆನಗೆ

ರಾಗ: ಜಂಜೋಟಿ

ಬೇಕೆನಗೆ ಸುಖಶಾಂತಿ ಬೇಕೆನಗೆ ನೆಮ್ಮದಿಯು। ಬೇಕೆನಗೆ ಸಂಪದವು ಬೇಕೆನಗೆ ಗುರುಬಲವು॥ಪ॥ ಬದುಕಲು ಬೇಕು ಧನಕನಕ ವಸ್ತುಗಳು। ವಾಸಿಸಲು ಬೇಕು ನೆಮ್ಮದಿಯ ಕುಟೀರವು। ತಂದೆತಾಯಿಯು ಬೇಕು ಪಾಲಿಸಿ ಲಾಲಿಸಲು। ಮಡದಿಮಕ್ಕಳು ಬೇಕು ಸುಖದಿಂದ ಬಾಳಲು॥1॥ ಗುರುಹಿರಿಯರು ಬೇಕು ಸನ್ಮಾರ್ಗ ತೋರಲು। ಇಷ್ಟಮಿತ್ರರು ಬೇಕು ಕಷ್ಟಸುಖ ಹಂಚಲು। ಹೃದಯವಂತಿಕೆ ಬೇಕು ಅನ್ಯರನು ಪ್ರೀತಿಸಲು। ಅನ್ಯೋನ್ಯತೆ ಇರಬೇಕು ಈ ಕಠಿಣ ಜಗದೊಳಗೆ॥2॥ ತನ್ನ ತಾನರಿಬೇಕು ಅನ್ಯರನು ತಿಳಿಬೇಕು। ದೈವಚಿಂತನೆ ಬೇಕು ಧ್ಯಾನ ಜಪವು ಬೇಕು। ಗುರುಕರುಣೆಯು ಬೇಕು ದೈವಕೃಪೆಯೂ ಬೇಕು। ಚೈತನ್ಯದಾಸನಿಗೆ ಸುಮತಿ ಕೊಡಬೇಕು॥3॥

## ಭರತನ ಒಲುಮೆ ದೃಢವಾಗಿರಲಾಗಿ (ವ್ಯಕ್ತಿಚಿತ್ರಣ)

ಭರತನ ಒಲುಮೆ ದೃಢವಾಗಿರಲಾಗಿ। ರಾಮನ ಪ್ರೀತಿಗೆ ಪಾತ್ರನೆಂದೆನಿಸಿದ॥ಪ॥ ಭರತನು ಗುಣಗಣಿ ಭ್ರಾತೃವತ್ಸಲನು। ನಿರ್ಮೋಹ ಚಿತ್ತನು ಪ್ರೇಮಾಂತರಂಗನು। ಕೈಕೇಯಿಸುತನು ದಿವ್ಯ ಸ್ವರೂಪನು। ಪ್ರಜಾಪರಿಪಾಲನು। ಶ್ರೀ ರಾಮ ಸೋದರನು॥1॥ ರಾಮ ಪಾದ ಸೇವಕ ರಾಮನಾಮ ಸಾಧಕ। ರಾಮಪಾದುಕೆಗೆ ಪಟ್ಟವ ಕಟ್ಟಿದ। ನಂದಿಗ್ರಾಮದಲಿ ವಾಸವ ಮಾಡುತ। ಶ್ರೀರಾಮನಿಗಾಗಿ ತಪಿಸುತಲಿದ್ದ॥2॥ರಾಮನು ಬರುವ ಸುದ್ದಿಯ ತಿಳಿದು। ಆನಂದದಿಂದಲಿ ತಾ ಕುಣಿದಾಡಿದ। ಹನುಮನ ಅಪ್ಪಿ ಸ್ನೇಹವ ಸೂಸಿದ। ಚೈತನ್ಯದಾಸನ ಮನ ಸಂತೈಸಿದ॥3॥

## ಮಂಗಳಂ ಹರಿಶ್ರೀ ವೇಣುಗೋಪಾಲನಿಗೆ

ಮಂಗಳಂ ಹರಿಶ್ರೀ ವೇಣುಗೋಪಾಲನಿಗೇ। ವಸುದೇವ ಸುತನಿಗೆ ವಾಸುದೇವಗೆ ವಾಸುಕಿ ಶಯನನಿಗೆ।।ಪ।। ಗೀತಾಚಾರ್ಯನಿಗೆ ಗೋಪೀ ಜನ ಪ್ರಿಯಗೇ। ಗೋವಿಂದ ಮಾಧವ ಗೋಪಾಲ ಕೇಶವ ನರಸಿಂಹಾಚ್ಯುತಗೆ।।1।। ವತ್ಸ ಪಾರ್ಥನಿಗೆ ಕಾಮಧೇನುವಿಗೇ। ಅದ್ವೈತಾ ಮೃತವರ್ಷಿಣಿ ಮಾತೆಗೆ-ಭಗವದ್ಗೀತೆಗೆ।।2।। ಲಕ್ಷ್ಮಣರಾಮಾಗ್ರಜಗೇ ಬಲರಾಮ ನನುಜನಿಗೇ। ಲಕ್ಷ್ಮೀವಲ್ಲಭ ನರಸಿಂಹ ಸರಸ್ವತಿ ಗುರುದತ್ತಾತ್ರೇಯಗೆ।।3।। ಭಕ್ತವತ್ಸಲಗೆ- ಭಾಗ್ಯದೇವತೆಗೇ। ಭೋಗ ಮೋಕ್ಷವ ಎರಡನು ಕೊಡುವ ಮಾತೆಯ ಚರಣಕ್ಕೆ।।4।। ನಂದ ಕುಮಾರನಿಗೆ ನವನೀತ ಚೋರನಿಗೇ। ನಾರಾಯಣಗುರು ಯಜ್ಞೇಶ್ವರನಿಗೆ ನಾರದ ಸನ್ನುತಗೆ।।5।। ಮಹಾಮಹಿಮನಿಗೆ ಮಂಜುಳಾಂಗನಿಗೆ। ಮನಮೋಹಕ ರೂಪ ಮಧುಸೂದನನಿಗೆ ಮಂಗಳಾತ್ಮನಿಗೆ।।6।। ತ್ರಿಗುಣಾತೀತನಿಗೆ ತನಯ ಶ್ರೀದತ್ತನಿಗೆ। ತಿರುಪತಿ ಗಿರಿವಾಸ ವೇಂಕಟೇಶ್ವರ ಪಾವನ ಸನ್ನಿಧಿಗೆ।।7।।

## ವನಭೋಜನಕೆ ಬಾ (ವನಭೋಜನ) ರಾಗ: ದರ್ಬಾರಿಕಾನಡ

ವನಭೋಜನಕೆ ಬಾ। ಬಾ ಗೆಳತಿ, ನೀನು ವನ ಭೋಜನಕೆ ಬಾ।। ಮನವಾರೆ ಸವಿದುಂಡು। ಮನೆಗೆ ಬರೋಣಂತೆ।।ಪ।। ಸಣ್ಣಕ್ಕಿ ಬೋನವ ಮಾಡಿಹರು। ಮೇಲ್ ಬೆಣ್ಣೆ ಕಾಸಿದ ತುಪ್ಪ ನೀಡುವರು। ಚಿನ್ನ ತವ್ವಿಯ ಮೇಲೆ ಹಣ್ಣು ಲಿಂಬಿಯ ರಸವನ್ನು ಹಿಂಡುತ ಮೊದಲನ್ನ ಉಣ್ಣಲಿಬೇಕು।।1।। ಸುರಳೀ ಹೋಳಿಗೆಯನು ಮಾಡಿಹರು। ಮೇಲ್ ಹುರಿಯಕ್ಕಿ ಹೋಳಿಗೆ ನೀಡುವರು।। ಅರೆದ ಸಕ್ಕರಿ ಮುದ್ದೆ ನೊರೆಹಾಲ್। ತುಪ್ಪದಲದ್ದಿ। ಸರಿಪಂಕ್ತಿಯಲ್ಲುಂಡು ಮರಳಿ ಬರೋಣಂತ।।2।। ತುಪ್ಪದಿ ಕರೆದಿಹ ಕರಿಗಡಬು। ಹೆರೆ ತುಪ್ಪ ತೊಡೆದ ಕುದಿಸಿದ ಕಡಬು। ತುಪ್ಪಗೊಳ್ಳೂರಿಗೆ। ತುಪ್ಪ ಹಾಲಿನೊಳದ್ದಿ। ಅಪ್ಪನ ಪಂಕ್ತೀಲಿ। ಒಪ್ಪದಿಂ ಕೂಡ್ರೋಣು।।3।। ಬಿಳಿಜೋಳ ಭಕ್ಕರಿ ಮಾಡಿಹರು। ಮೇಲ್ ಕೆನಿ ಕೆನಿ ಮೊಸರನ್ನು ನೀಡುವರು। ಹೊಳೆಸಾಲ್ ಬದನೀಕಾಯಿಗಳ ತುಂಬಗಾಯಿ ಪಲ್ಯ। ತಾಳ್ ಗಾಯಿ ಚಟ್ನಿಯ ತಳಿಕೆಯಲ್ಲಿರಿಸಿಹೆ।।4।। ಪದರು ಚಪಾತಿಯ ಮಾಡಿಹರು। ಮೇಲೆ ಬದಿಗೆ ತುಪ್ಪವನು ನೀಡಿಹರು। ಚದುರ ಚಕಳಿ ಜುಣಕ। ಬದಿಗೇ ಹಿಂಡಿಯ ಮುದ್ದಿ। ಹದಮಾಡಿ ತಿನ್ನುತ್ತ। ನದಿಯ ನೀರ್ ಕುಡಿಯುವಾ।।5।। ಮಥ್ಥ ಮಜ್ಜಿಗೆಯನ್ನು ಮಾಡಿಹರು। ಹೆಪ್ಪಿಟ್ಟ ಹಾಲ್। ಮೊಸರನ್ನು ನೀಡುವರು। ಕಟ್ಟಕಡೆಗೆ ಬೇಕಾದಷ್ಟು ಕುಡಿದು। ಜಗಜಟ್ಟಿ ಹನುಮನನ್ನು ನಿಷ್ಠೆಯಿಂ ನೆನೆಯುವಾ।।6।।

## ಶ್ರೀಮಾನ್ ತಿಲಕಬಾಳಾ (ವ್ಯಕ್ತಿಚಿತ್ರಣ)

ಶ್ರೀಮಾನ್ ತಿಲಕಬಾಳಾ ತಿಲಕಬಾಳಾ। ಗಂಗಾಧರ ಬಾಳಾ। ಶ್ರೀಮಾನ್ ತಿಲಕ ಬಾಳಾ।।ಪ।। ಪುಣ್ಯಪತ್ತನದೀ ಜನ್ಮ ಧರಿಸಿದೀ ಪುಣ್ಯಾತ್ಮನೆ ತಿಲಕಾ। ಭರತಖಂಡ ಕನಕಾ।।1।। ಮುಂಬಾಪುರದೇ। ಬಿಂಬವ ತೊರೆದೇ। ಶಂಭುಪದವ ಪಡೆದೇ। ಗಂಗಾಧರ ಬಾಳಾ।।2।। ಲೋಕಮಾನ್ಯ ಶ್ರೀ ಲೋಕಕೇಸರೀ। ಲೋಕಮಾನ್ಯ ತಿಲಕಾ। ಭಾರತ ಭೂಪದಕಾ।।3।।

## ಶಿವ ರಾಮ ಕೃಷ್ಣ ಗೋವಿಂದ ರಾಗ: ರಾಗಮಾಲಿಕೆ

ಶಿವ ರಾಮ ಕೃಷ್ಣ ಗೋವಿಂದ ನರಹರಿ। ನಾರಾಯಣಾ ಕಾಶೀ ವಿಶ್ವನಾಥ।।ಪಲ್ಲವಿ।। ಪಂಡರೀಪುರವಾಸ ಶ್ರೀ ಪಾಂಡುರಂಗಾ, ಚಿದಂಬರೇಶ ಶ್ರೀನಟರಾಜ। ನತಜನಪಾಲಕ ನವಗ್ರಹ ರೂಪ, ಪಾರ್ವತೀ ಸುಕುಮಾರ ಗಣಪತಿ ಸ್ಕಂದ ।।ಪಲ್ಲವಿ।। ಕಾಮಾಕ್ಷಿ ಮೀನಾಕ್ಷಿ ಕಾಶೀವಿಶಾಲಾಕ್ಷಿ ಜಗದಂಬಾ ಶಾರದಾ ಲಕ್ಷ್ಮೀ ಗೌರೀ। ಭುವನೇಶ್ವರೀ ರಾಜರಾಜೇಶ್ವರೀ। ಜಗದೀಶ್ವರೀ ಶಿವಶಂಕರೀ। ಆದಿಪರಾಶಕ್ತಿ ಅಖಿಲಾಂಡೇಶ್ವರೀ।।1।। ಅಂಜನಸುಕುಮಾರ ಶ್ರೀ ಆಂಜನೇಯ, ಮಂತ್ರಾಲಯ ವಾಸ ಶ್ರೀರಾಘವೇಂದ್ರ। ಗುರುವಾಯೂರು ಪುರವಾಸ ಗುರುವಾಯೂರಪ್ಪ

ಶಬರಿಮಲೈ ವಾಸ ಶರಣಂ ಅಯ್ಯಪ್ಪಾ॥2॥ ಮತ್ಸ್ಯಕೂರ್ಮಧರ ದಶವಿಧರೂಪ। ಅತಿ ಶುಭದಾಯಕ ಆನಂದರೂಪ। ಶಂಖಚಕ್ರಧರ ತಿರುಪತಿವಾಸ। ಕಲಿಯುಗ ವರದಾಶ್ರೀಗೋವಿಂದ। ವಿಶ್ವನಾಥ ನಾರಾಯಣ ನರಹರಿ ಗೋವಿಂದ, ಕೃಷ್ಣ ರಾಮ ಶಿವ॥3॥

**ಸತ್ವ ಚಿತ್ತಾನಂದ ಪೂಜೆ** **ರಾಗ: ಬೇಹಾಗ್**

ಸತ್ವ ಚಿತ್ತಾನಂದ ಪೂಜೆ ಸಗುಣ ನಿರ್ಗುಣ ಪೂಜೆ। ಮಣೆಯಿಟ್ಟು ಆಧಾರದಿಂದರ್ಥವ ತಿಳಿದ ಆತ್ಮ ಪೂಜೆ॥ಪ॥ ಶುದ್ಧ ಸ್ನಾನಕೆ ಶಿವ ತಾನೆಂದೆನ್ನಿಪ ಪೂಜೆ ಅಂತರಂಗಧ ಪೂಜೆ ನಾಲ್ಕು ವಾಕ್ಯದ ಪೂಜೆ ತತ್ವಾರ್ಥದೊಳಗೆ ನಮಿಪ ಪೂಜೆ॥1॥ ಗುರುವಿನ ಚರಣಕೆ ಎರಗಿ ನಮಿಪ ಪೂಜೆ ಶರೀರ ಭವವ ಮರೆತಿರುವ ಪೂಜೆ ತಾರಕ ಬ್ರಹ್ಮ ತನ್ಮಯದ ಪೂಜೆ॥2॥

**ಸಂಗೀತದೊಡನೆಯೆ ಓ ತಂಬೂರಿ**

ಸಂಗೀತದೊಡನೆಯೆ ಓ ತಂಬೂರಿ। ಹಾಡನು ಹಾಡುವೆ ಕೋಲಾಕಾರಿ॥ಪ॥ ತಿರುಪೆಯ ಬೇಡಲು ನೀನಾಧಾರಿ। ಟಿಂಗ್ ಟಿಂಗ್ ಗೆಳೆಯ ಟಿಂಗ್ ಟಿಂಗ್ ಟಿಂಗ್॥1॥ ಸೋರೆಯ ಬುರುಡೆ ನಿನ್ನಯ ತಲೆಯು। ಬಿದಿರಿನ ಕೊಳವೆ ನಿನ್ನಯ ದೇಹವು। ಉಕ್ಕಿನ ಕಂಬಿಯ ನಿನ್ನಯ ಜೀವ। ಟಿಂಗ್ ಟಿಂಗ್ ಗೆಳೆಯ ಟಿಂಗ್ ಟಿಂಗ್ ಟಿಂಗ್॥2॥

## ಕೀರ್ತನೆ

**ಅಪರಾಧಮುಲನ್ನಿಯು** **ರಾಗ: ಲತಾಂಗಿ, ಆದಿತಾಳ**

ಅಪರಾಧಮುಲನ್ನಿಯು ಮನ್ನಿಂಚಿ ಆದರಿಂಚಿನೇ ನೇ ಜೇಸಿನ॥ಪ॥ ಕೃಪ ಜೇಸಿ ನಾ ಮನವ್ಯಾಲಗಿಂಚಿ ಕ್ರೀಗಂಟ ಜೂಡ ಸಮಯಮಿದೇನ॥ಅ.ಪ॥ ವೇಗನನ್ನು ಬ್ರೋವುಮನಿ ಎಂತೋ ನಿನ್ನು। ವೇಡುಕೊಂಟಿಗಾ ಶ್ರೀ ವೆಂಕಟೇಶ ನೀವು। ಜಾಗು ಸೇಯ ಗಾನ ವೇದ ತಾಳಗನಿ। ಜಾಲಿರ್ಜೇದಿ ನನ್ನುಬ್ರೋಚುಟಕು॥ಚ॥

**ಎಂಥ ನೇರ್ಚಿನ** **ರಾಗ: ಉದಯಚಂದ್ರಿಕೆ, ದೇಶಾದಿತಾಳ**

ಎಂಥ ನೇರ್ಚಿನ ಎಂತ ಜೂಚಿನ। ಎಂತ ವಾರಲೈನ ಕಾಂತದಾಸುಲೆ॥ಪ॥ ಸಂತತಂಬು ಶ್ರೀಕಾಂತ ಸ್ವಾಂತಸಿ-ದ್ದಾಂತಮೈನ ಮಾರ್ಗಚಿಂತಲೇನಿವಾ॥ಅ.ಪ॥ ಪರಹಿಂಸ ಪರಭಾಮಾನ್ಯ ಧನ। ಪರಮಾನ ವಾಪವಾದ। ಪರಜೀವನಾದುಲ ಕನೃತಮೇ। ಭಾಷಿಂಚೆದರಯ್ಯ ತ್ಯಾಗರಾಜನುತ ॥ಎಂ॥

**ಕಲೈಯಿಂನ್ಬಮೇ ನಿಲೈಯಿಂನ್ಬಮಾಂ (ತಮಿಳು)** **ರಾಗ: ಹಂಸಧ್ವನಿ, ಆದಿತಾಳ**

ಕಲೈಯಿಂನ್ಬಮೇ ನಿಲೈಯಿಂನ್ಬಮಾಂ ಕವಿಯಿನ್ಬಮೇ ಅಮಿಳ್ದಿಂಬ ಮಾಂ ತಲೈಎಂಬಿನಾಲ್ ತಾಯ್‌ಶಕ್ತಿಯೇ ತರುಂತೀನ್‌ಸುವೈವಿರುಂದುಂ। ಸುವೈತೇರುವೋಠ ಮೇದಿನಿಲ್‌ಸುವೈ ತೇರುಂ ವೋರವೈಮೀದಿನಿಲ್ ಶುಭಮೋಂಗಿಯೇ ಶೊರಿ ಮೇಘ ಮಾಯ್ ನವೈಯೇಯಿಲಾ ನಲನೇವಿಳೈ ನರವೊರಿಡುಂ ಇರವಾದದೆ॥ಚರಣ॥

**ದುರ್ಮಾರ್ಗಚರಾಂಧಮುಲನು** **ರಾಗ: ರಂಜನಿ, ರೂಪಕತಾಳ**

ದುರ್ಮಾರ್ಗಚರಾಧಮುಲನು ದೊರೆ ನೀವನ ಜಾಲರಾ॥ಪ॥ ಧರ್ಮಾತ್ಮಕ ಧನ ಧಾನ್ಯ-ದೈವಮು ನೀವೈ ಯುಂಡಗ॥ಅ.ಪ॥ ಪಲುಕು ಪೋಟಿವಿ ಸಭಲೋನ ಪತಿತ ಮಾನವುಲ ಕೊಸಗು। ಖಲುಲ ನೆಚ್ಚಟ ಪೊಗಡನಿ ಶ್ರೀಕರ ತ್ಯಾಗರಾಜ ವಂದ್ಯ॥ದು...॥ಚರಣ॥

**ನಿನ್ನು ಜೂಚಿ ಧನ್ಯುಡೈತಿ** **ರಾಗ: ಸೌರಾಷ್ಟ್ರ, ಆದಿತಾಳ**

ನಿನ್ನು ಜೂಚಿ ಧನ್ಯುಡೈತಿ ನೀರಜ ನೇತ್ರ।।ಪ।। ವನವಾಸನಾದಿ ವಂದಿತ ಚರಣ। ವನಜನಾಭ ದೇವಾಧಿದೇವ।।ಅ।। ಸಕಲ ಲೋಕಾಧಾರ ಸಚ್ಚಿದಾಕಾರ। ಸಕಲ ಜೀವೇಶ್ವರ ಸರ್ವೇಶ್ವರ। ಸಕಲ ಪಾಪಹರ ಸಾಧು ಹೃದಯವಿಹಾರ। ಸಕಲ ವರದಾಯಕ ಶ್ರೀವೆಂಕಟೇಶ್ವರ।।ಚರಣ।।

**ಪರಮಾತ್ಮುಡು ವೆಲೆಗೇ** **ರಾಗ: ವಾಗಧೀಶ್ವರಿ, ಆದಿತಾಳ**

ಪರಮಾತ್ಮುಡು ವೆಲೆಗೇ ಮುಚ್ಚಟಬಾಗ ದೆಲುಸುಕೋರೇ।।ಪ।। ಹರಿಯಟ ಹರುಡಟ ಸುರುಡಟ ನರುಲಟ। ಅಖಿಲಾಂಡ ಕೋಟುಲಟ ಅಂದರಿಲೋ।।ಅ.ಪ।। ಗಗನಾನಿಲ ತೇಜೋ ಜಲ ಭೂಮಯಮಗು। ಮೃಗ ಖಗ ನಗೆ ತರು ಕೋಟುಲಲೋ। ಸಗುಣಮುಲಲೋ ವಿಗುಣಮುಲಲೋ ಸತತಮು। ಸಾಧು ತ್ಯಾಗರಾಜಾದಿ ಆಶ್ರಿತುಲಲೋ।।ಚರಣ।।

**ಮೋಕ್ಷಮುಗಲದಾ ಭೂಮಿಲೋ** **ರಾಗ: ಸಾರಮತಿ, ಆದಿತಾಳ**

ಮೋಕ್ಷಮುಗಲದಾ ಭೂವಿಲೋ ಜೀವ-। ನ್ಮುಕ್ತುಲು ಗಾನಿ ವಾರಲಕು।।ಪ।। ಸಾಕ್ಷಾತ್ಕಾರ ನೀ ಸದ್ಭಕ್ತಿ। ಸಂಗೀತ ಜ್ಞಾನ ವಿಹೀನುಲಕು।।ಅ.ಪ।। ಪ್ರಾಣಾನಲ ಸಂಯೋಗಮು ವಲ್ಲ। ಪ್ರಣವ ನಾದಮು ಸಪ್ತಸ್ವರ ಮುಲೈ ಬರಗ। ವೀಣಾ ವಾದನ ಲೋಲುಡೌ ಶಿವಮನೋ। ವಿಧ ಮೆರುಗರು ತ್ಯಾಗರಾಜವಿನುತ।।ಮೋ.....।। ಚರಣ।।

**ರಾಗರತ್ನ ಮಾಲಿಕಚೇ** **ರಾಗ: ರೀತೀಗೌಳ, ರೂಪಕತಾಳ**

ರಾಗರತ್ನ ಮಾಲಿಕಚೇ ರಂಜಿಲ್ಲುನಟ ಹರಿಶತ।।ಪ।। ಬಾಗ ಸೇವಿಂಚಿ ಸಕಲ ಭಾಗ್ಯ ಮೊಂದುದಾಮು ರಾರೇ।।ಅ.ಪ।। ನೈಗಮ ಷಟ್ಶಾಸ್ತ್ರ ಪುರಾ-ಣಾಗಮಾರ್ಥ ಸಹಿತಮಟ। ಯೋಗಿ ವರುಲು ಯಾನಂದಮು-ನೊಂದೆಡು ಸನ್ಮಾರ್ಗಮಟ। ಭಾಗವತೋತ್ತಮುಲು ಗೂಡಿ ಪಾಡೆ ಕೀರ್ತನಮುಲಟ। ತ್ಯಾಗರಾಜು ಕಡತೇರ, ತಾರಕಮನಿ ಚೇಸಿನ ಶತ।।ಚರಣ।।

**ಶ್ರೀರಮ್ಯಚಿತ್ತಾಲಂಕಾರ ಸ್ವರೂಪ** **ರಾಗ: ಜಯ ಮನೋಹರಿ, ಆದಿತಾಳ**

ಶ್ರೀರಮ್ಯಚಿತ್ತಾಲಂಕಾರ ಸ್ವರೂಪ ಬ್ರೋವುಮು।।ಪ।। ಮಾರಾರಿ ದೇವೇಂದ್ರಪಿತಾ ಮಹಾದ್ಯಷ್ಟದಿಕ್ಪಾಲಸೇವ್ಯ।।ಅ.ಪ।। ಸುರೇಶಾರಿಜೀವಾಪಹರವರ ಸೋದರ ಧರಾಪ।।ಅ.ಪ।। ಶ್ರೀಪ ನರಾನಂದನೇ ನೀವಲೆಗಾನರಾ ತ್ಯಾಗರಾಜವಿನುತ ।।ಚರಣ।।

**ಸಂಗೀತ ಜ್ಞಾನಮು ಭಕ್ತಿವಿನಾ** **ರಾಗ: ಧನ್ಯಾಸಿ, ಆದಿತಾಳ**

ಸಂಗೀತ ಜ್ಞಾನಮು ಭಕ್ತಿವಿನಾ। ಸನ್ಮಾರ್ಗಮುಗಲದೇ ಮನಸಾ।।ಪ।। ಭೃಂಗಿನಟೇಶ ಸಮೀ ರಜ ಘಟಜ। ಮತಂಗ ನಾರದಾದುಲುಪಾಸಿಂಚು।।ಅ.ಪ।। ನ್ಯಾಯಾ ನ್ಯಾಯಮುಲುದೆಲು-ಸುನು। ಜಗಮುಲು ಮಾಯಾಮಯ। ಮನಿದೆಲುಸುನು ದುರ್ಗುಣ। ಕಾಯಜಾದಿ ಷಡ್ರಿಪುಲು ಜಯಿಂಚೆಡಿ। ಕಾರ್ಯಮು ದೆಲುಸುನು ತ್ಯಾಗರಾಜುನಿಕಿ ।।ಚರಣ।।

## ಭಜನೆ

**ಶಂಕರ ಕೇ ಢಮರುಸೇ (ಹಿಂದಿ)** **ರಾಗ: ಯಮನ್ ಕಲ್ಯಾಣಿ**

ಶಂಕರ ಕೇ ಢಮರುಸೇ ನಿಕಲಾ। ರಘುಪತಿ ರಾಘವ ರಾಜಾರಾಂ। ನಾರದಕೇ ವೀಣಾ ಸೇ ನಿಕಲಾ। ಪತಿತ ಪಾವನ ಸೀತಾರಾಂ। ಅರ್ಜುನ್ ಕೇ ಘಾಂಢೀವ್ ಸೇ ನಿಕಲಾ। ಜಯ ಮಧುಸೂದನ ಜಯ ಘನಶ್ಯಾಂ। ದ್ರೌಪದೀ ಕೀ ಆಹೋಂ

ಸೇ ನಿಕಲಾ। ಲಾಜರಖೋ ಹೇ ಭಗವಾನ್।। ಶಬರೀಕೇ ಬೋರೋಂ ಸೇ ನಿಕಲಾ। ಭಕ್ತ ಭೂಖೆ ಥೇ ಭಗವಾನ್। ಭಕ್ತ ಪ್ರಹ್ಲಾದ್ ಕೆ ಮುಹ್ ಸೇ ನಿಕಲಾ। ಮುಝುಮೇ ರಾಮ್। ತುಝುಮೇ ರಾಮ್। ಚಾರೋಂ ವೇದ್ ಶಾಸ್ತ್ರ ಪುಕಾರೇ। ಹರಿ ಓಂ ಹರಿ ಓಂ ಹರಿ ಓಂ ಹರಿಓಂ।।

